# ಪುನರ್ಜನ್ಮ

ಅಥವಾ

# ಮೃತ್ಯುಂಜಯ

[ಕಾಲ್ಪನಿಕ ಏಕಾಂಕ ಪ್ರಹಸನ]

**ರಾ. ವೆಂ. ಶ್ರೀನಿವಾಸ**

ಪ್ರಕಾಶಕರು :

ಮಾಧವ ಸನ್ಸ್

ಬೆಂಗಳೂರು

# ಕೃತಜ್ಞತೆ

ಈ ನಾಟಕವನ್ನು ಮೊದಲ ಬಾರಿ ಪ್ರಸಾರಮಾಡಲು ಅವಕಾಶ ಕೊಟ್ಟ 'ಆಕಾಶವಾಣಿ'ಯ ಅಧಿಕಾರಿಗಳಿಗೂ, ಅಂದು ನಾಟಕದಲ್ಲಿ ಪಾತ್ರವಹಿಸಿ ಸಹಾಯಮಾಡಿದ ನನ್ನ ಮಿತ್ರರಿಗೂ ನಾನು ತುಂಬ ಕೃತಜ್ಞನಾಗಿದ್ದೇನೆ.

ಈಗ, ಈ ನಾಟಕಕ್ಕೆ ಅಚ್ಚಿನ ರೂಪ ದೊರೆತುದು 'ಮಾಧವ ಸನ್ಸ್' ಅವರ ಕೃಪೆಯಿಂದ. ಇವರಿಗೂ, ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನ ಅಧಿಕಾರಿಗಳಿಗೂ ನನ್ನ ಅನಂತವಂದನೆಗಳು.

ಮೈಸೂರು,
೨೫-೧೦-೧೯೪೫

ರಾ. ನೆಂ. ಶ್ರೀನಿವಾಸ

# ಪಾತ್ರವಿವರ

---

## ನರಕ

| | | | |
|---|---|---|---|
| ಯಮ | .... | .... | Death Officerಉ |
| ಚಿತ್ರಗುಪ್ತ | .... | .... | Head Clerkಉ |
| ಕರಾಳ | .... | .... | ಆಫೀಸಿನ ಅಚ್ಚುಮೆಚ್ಚಿನ ಆಳು |
| ಜೀವಾರಿ | .... | .... | ಜೀವ ತರುವ ದೂತ |

Typistಉ, ಹುಡುಗಿ, R. M. ಲಕ್ಷ್ಮಯ್ಯ, ಇತ್ಯಾದಿ



## ಭೂಮಿ

| | | | |
|---|---|---|---|
| R. M. ಲಕ್ಷ್ಮಯ್ಯ | | .... | ಸತ್ತು ಬದುಕಿದ ಸಾಹುಕಾರ |
| ಸಾವಿತ್ರಮ್ಮ | .... | .... | ಸಾಹುಕಾರರ ಆರನೆಯ ಹೆಂಡತಿ |
| ಮುದ್ದಾಮು | .... | .... | ಸಾಹುಕಾರರ ೨೦ ವರುಷದ ಗಂಡು ಮಗು; Screw looseಓ, ಏನೊ! |
| ಸಮಾಧಾನಪ್ಪ | | .... | ಸಾವಿತ್ರಮ್ಮನ ಅಣ್ಣ; ಭಾವಯ್ಯನ Parasiteಉ; ಸಾಹುಕಾರರು ಈತನನ್ನು ಮಮತೆಯಿಂದ " ಸಮಾಧಿ " ಎಂದು ಕರೆಯುತ್ತಾರೆ. |



## ದೃಶ್ಯ ಒಂದು : ನರಕ

---

[Death Officeಉ. ನಡುವೆ ಯಮಸಾಹೇಬರ Tableಉ-ಕುರ್ಚಿ. ಅವರ ಎಡಭಾಗಕ್ಕೆ ಸ್ವಲ್ಪ ದೂರದಲ್ಲಿ Head Clerk ಚಿತ್ರಗುಪ್ತನ Tableಉ-ಕುರ್ಚಿ. ಇಬ್ಬರನ್ನೂ ಬೇರ್ಪಡಿಸಲು ಇಬ್ಬರ ನಡುವೆ ಒಂದು ಪುಟ್ಟ Screenಉ. ಬಲಭಾಗಕ್ಕೆ ಸ್ವಲ್ಪ ದೂರದಲ್ಲಿ ಎರಡ್ table ಉ-ಕುರ್ಚಿ; ಒಂದು Typistಗೆ, ಇನ್ನೊಂದು 2nd Clerkಗೆ. ಈ Clerical Staff ಅನ್ನು Officerಅ Tableಇಂದ ಬೇರ್ಪಡಿಸಲು ಮತ್ತೊಂದು Screenಉ. 2nd Clerk ಬಂದಿಲ್ಲ. Typistಉ ತನ್ನ ಕೆಲಸದಲ್ಲಿ ತಾನು ತೊಡಗಿದ್ದಾನೆ. Tableಗಳ ಮೇಲೆ ಕಂತೆ ಕಂತೆ ಕಾಗದ ಬಿದ್ದಿದೆ. Officeಇನ ಲಕ್ಷಣವೆಲ್ಲ ಇಲ್ಲಿಯು ಇಂದಿನ Officeನಲ್ಲಿರುವಂತೆಯೆ. ಆದರೆ ನರಕದವರು ಉಡುಪಿನಲ್ಲಿ ಪೌರಾಣಿಕ ವ್ಯಕ್ತಿಗಳು. ಬಲಭಾಗದ Side-wingಇನ ಮೇಲೆ 'DEATH OFFICE, **ನರಕ**' ಎಂಬ Boardಉ ನೇತುಬಿದ್ದಿದೆ; ಅದೇ ಮುಂಬಾಗಿಲು. ನಡುವೆ ಗೋಡೆಯ ಮೇಲಿರುವ ದೊಡ್ಡ ಗಡಿಯಾರ ಹನ್ನೆರಡೂಕಾಲು ಗಂಟೆ ತೋರಿಸುತ್ತಿದೆ. ಎಲ್ಲರ Tableಉ-ಕುರ್ಚಿಗಳ ಸಲಕರಣೆ, ಶೃಂಗಾರವೆಲ್ಲ ಭೂಮಿಯ Officeನಲ್ಲಿರುವಂತೆಯೇ ಇವೆ. Head Clerk ಚಿತ್ರಗುಪ್ತ ಬರೆಯುವುದರಲ್ಲಿ ನಿರತನಾಗಿದ್ದಾನೆ.]

ಚಿತ್ರಗುಪ್ತ—ಕರಾಳ! (ಯಾರೂ ಬರುವುದಿಲ್ಲ. Calling Bell ಬಾರಿಸಿ, ಸ್ವಲ್ಪ ತಡೆದು ಪುನಃ) ಕರಾಳ!! ಕರಾಳ ss !!!

ಕರಾಳ—(ಪ್ರವೇಶಿಸಿ) ಬಂದೆ ಬುದ್ಧಿ.

ಚಿತ್ರಗುಪ್ತ—ಹನ್ನೆರಡ್ಗಾಗ್ಹೋಯ್ತು, ಸಾಹೇಬ್ರು ಬರ್ಲೇ ಇಲ್ವಲ್ಲೊ........ ನೋಡು ಬರ್ತಿದಾರೇನೊ. ಇವತ್ತು....ಬಹ್ಳ....Papers........

ಕರಾಳ—ನೋಡ್ದೆ ಬುದ್ದಿ, ಕಾಣ್ಸೋಕಿಲ್ಲ. ಆದ್ರೇ.. ದೂರ್ದಲ್ಲೆಲ್ಲೊ ಕ್ಕೋಣ ಕೂಗ್ದಂಗಾಯ್ತು, ಅದ್ಕೆ ಅಂಗೇ ಗವ್ನ ಮಡ್ಗಿದ್ದೆ.

ಚಿತ್ರಗುಪ್ತ—ಹ್ಞು, ಹೋಗು, ನೋಡು, ಹಾಗಾದ್ರೆ ಬಂದ್ರೇನೊ.

(ಕರಾಳ ಹೊರಗೆ ಹೋಗಿ, ತಕ್ಷಣವೇ ಆತುರದಿಂದ, ಆಶ್ಚರ್ಯದಿಂದ ಪುನಃ ಪ್ರವೇಶಿಸುವನು.)

ಕರಾಳ—ಬುದ್ದೀ ಬಂದೇಬಿಡ್ತು ಕ್ಕೋಣ! ಇವತ್ಯಾಕೊ ಬಹ್ಳ ಜೋರಾಗ್ಬರ್ತಿದಾರೆ ಬುದ್ದಿ ಸಾಹೇಬ್ರು! (ಹೊರಗೆ ಹೋಗುವನು. ಯಮರಾಯರ ಪ್ರವೇಶ. ಚಿತ್ರಗುಪ್ತ ಎದ್ದು ನಿಂತು 'ನಮಸ್ಕಾರ ಸಾರ್' ಎಂದು ಕೈ ಮುಗಿದು, ಯಮರಾಯರ ಹಿಂದೆ ಹೊರಡುವನು. ಯಮರಾಯರು 'ನಮಸ್ಕಾರ' ಎನ್ನುತ್ತಾ ತಮ್ಮ ಕುರ್ಚಿಯ ಮೇಲೆ ಕುಳಿತುಕೊಳ್ಳುವರು. ಚಿತ್ರಗುಪ್ತ, ಸಾಹೇಬರ Tableಇನ ಹತ್ತಿರ ಸುಮ್ಮನೆ ನಿಲ್ಲುವನು.)

ಯಮ—(ಹೊರಗಿನಿಂದ ಬಂದ ಕರಾಳನನ್ನು ಕುರಿತು) Shedನಲ್ಕಟ್ಟೀನೊ ಕ್ಕೋಣಾನ? (ಕರಾಳ 'ಆಯ್ತು ಬುದ್ದಿ ಕಟ್ದೆ' ಎನ್ನುವನು)............ ಇವತ್ಯಾಕೊ ಬಹ್ಳ ತೊಂದ್ರೆ ಮಾಡ್ಬಿಡ್ತು.......ಈ ಮಳೆಗಾಲ ಯಾಕ್‌ಬರುತ್ತ್ಯೋ ಅನ್ಸುತ್ತೆ. (ಖಾಲಿಯಾಗಿರುವ, 2nd Clerkಇನ ಕುರ್ಚಿಯನ್ನು ನೋಡಿ) ಇವತ್ತೇನು ಈ Clerkಉ ರಜಾ! ಏನೋಪ್ಪ, ಕೆಲ್ಸ ಒಳ್ಳೇ ಜೋರಾಯ್ತು. Quarterly Report ಕಳ್ಸಿಲ್ಲ........Executiveನೋರೇನೊ........ತಕ್ರಾರ್ಟ್ಗೆ........ಅವ ರ್ಕೆಲ್ಸ ಅವರ್ಮಾಡ್ಬಿಡ್ತಾರೆ. ಆದ್ರೇ ಇಲ್ಲಿ ನಮ್ಕೆಲ್ಸವೇ ನಡ್ಯೋದಿಲ್ಲ.......ಎಲ್ಲ Pendingಉ........ಆ ತ್ರಿಮೂರ್ತಿಗಳಿಗೇನ್ ಗೊತ್ತಾಗುತ್ತೆ ನಮ್ಕಷ್ಟ? Officeನಲ್ ಸರ್ಯಾದ್ Staff ಇಲ್ದೇ ಇದ್ರೆ ಏನ್ ಬಡ್ಕೊಳ್ಳೋದು! (ಆ ವಿಷಯವನ್ನು ಬಿಟ್ಟು)........ ಹೋಗ್ಲಿ........ಈಗ sss........ಏನೇನ್ Urgent ಟಪಾಲು?

ಚಿತ್ರಗುಪ್ತ (ಕೆಲವು ಕಾಗದಗಳನ್ನು ತೆಗೆದುಕೊಂಡು) ಇವತ್ತೇನ್ ಹೆಚ್ಚಿಲ್ಲ ........ಬಂದಿಷ್ಟ್ ಮೃತ್ಯುಂಜಯ ಜಪ Certificates ಬಂದಿವೆ, ಅಷ್ಟೆ.

ಯಮ--ಅದ್ಸರಿ ಹು, ಮಾಮೂಲ್ ಆಗ್ಹೋಗ್ಬಿಟ್ಟಿದೆ. ನಮ್ Office ಸಾಯೋವರ್ಗೂ ಅದೇನ್ ಸಾಯೋದಿಲ್ಲ!.... ...ಎಲ್ಲಿ ಇಲ್ತಾ ನೋಡೋಣ. (ಕಾಗದಗಳನ್ನು ತೆಗೆದುಕೊಂಡು ನೋಡಿ) ಅಬ್ಬ! ಐವತ್ತು! ಅಲ್ಲs ಇದೇನಿದು! ಮನುಷ್ಯರ್ ಮಂತ್ರಕ್ ಮರ್‍ಳಾಗಿ ಹೀಗೆಲ್ಲ ಮಾಡ್ತಾರ್‍ಯೇ? ಉರಿಯೋ ಬೆಂಕೀಗ್ ತುಪ್ಪ ಸುರ್‍ದು, ಮುಖಕ್ ಮುಂಗ್ಹಾಕ್ತಿ ಎತ್ತಿ, ಹಣ್ಕಾಯ್ ಕೊಟ್ಬುಟ್ರಕ್ಕೆ— Director of Death ಆಗಿದ್ಕೊಂಡು-ರುದ್ರಸಾಹೇಬ್ರು ಹೀಗೆಲ್ಲ Certificates ಕೊಟ್ಬಿಟ್ಟಹುದೇ ಜನಕ್ಕೆ? .......!.... ...!. ಜನ ಏನಂದ್ಕೊಳ್ತಾರೆ! ಅದಕ್ಕೇ ಪೃಥ್ವೀಲಿರೋ Philosophersಉ ಈ ದೇವರ್‍ನೆಲ್ಲ 'ಲಂಚ್ಕೋರ್‍ರು' ಅನ್ನೋದು........

ಚಿತ್ರಗುಪ್ತ ಇವತ್ತಿನ್ 'ತ್ರಿಶೂಲ' ಪತ್ರಿಕೆ ನೋಡಿದ್ರ ಸಾರ್?

ಯಮ—(ಆಸಕ್ತಿಯಿಂದ) ಇಲ್ಲ... ...ಏನು! ...ಏನಿದೆ....ವಿಶೇಷ?

ಚಿತ್ರಗುಪ್ತ- ಆ.. ..'ಭೂಲೋಕದ್ ವಾರ್ತೆ ಕಾಲಂ'ನಲ್ಲಿ ದೊಡ್ಸಾಹೇಬ್ರು, ವಿಷ್ಣು........ಇವರ್‍ದಿಷ್ಟ್ಯಾ ಎಲ್ಲಿ ತುಂಬ ಬಂದ್ಬಿಟ್ಟಿದೆ ಸಾರ್. .. ....ಭೂಲೋಕದಲ್ಲಿ ಮೊನ್ನೆ. ಒಂದ್ಕಡೆ ಮಹಾರುದ್ರಯಾಗ ನಡೀತಂತೆ .......ಅದಕ್ಕೆ ಐವತ್ಸಾವಿರ್‍ರೂಪಾಯ್ ಖರ್ಚಾಯ್ತಂತೆ! ಒಂದ್ಸಲವತ್ಕಡೆ ಶಿವದೇವಾಲಯ ಕಟ್ಟಿದಾರಂತೆ! ಅದೂ ಅಲ್ದೆ.... ಶಿವರಾತ್ರಿ ದಿನವಂತೂ ದೊಡ್ಸಾಹೇಬ್ರ್ ವೈಭವ ಹೇಳೋಕ್ ತೀರ್‍ದಂತೆ!........ಗೋಕುಲಾಷ್ಟಮೀನೂ ಹಾಗೇಂತೆ!........ವಿಷ್ಣು ವಿಜೃಂಭಣೆ ವರ್ಣಿಸೋಕ್ ಸಾಧ್ಯವಿಲ್ವಂತೆ!....ನೋಡಿ ಸಾರ್ ... ಇವ್ರೂ........ನಿಮ್ಮಂತೇನೇ Officers ಆಗಿದ್ಕೊಂಡು........ ಮಾಡ್ತಿರೋ ಕೆಲ್ಸ?........ಆ್ಞ!........?

ಯಮ—ಹೌದು ಚಿತ್ರಗುಪ್ತ, ನಾ ಮೊದ್ಲಿಂದ ನೋಡ್ತಿದೀನಿ . ನೋಡು ಆದ್ಯಾಕೆ? ಈಗ್ಲೇ ನೋಡು, ಲಂಚ ತೊಗೊಂಡ್ ಮೃತ್ಯುಂಜಯ ಜಪ Certificates ಕೊಟ್ಬಿರೋದ!........ನಾವೇನ್ಮಾಡೋದು! ........ಮೇಲ್ನಾಫೀಸ್ರು! ಮಾತಾಡೋಹಾಗಿಲ್ಲ ... . ಬಾಯಿಗ್ ಬೀಗ ಹಾಕ್ಕೊಂಡ್ ಬಿದ್ದಿರ್ಬೇಕು.

ಚಿತ್ರಗುಪ್ತ—(ಸ್ವಲ್ಪ ನಿಧಾನವಾಗಿ) ಯಾಕ್ ಸ್ವಾಮಿ, ತಮ್ಗೇನ್ ಕಡ್ಮೆ? ತಾವೇನ್ Equal Statusನಲ್ಲಿಲ್ವೇ? ..ಸ್ವಲ್ಪ ಏನಾದ್ರೂ ..

ಯಮ—ಏನಿದೆ ಮಣ್ಣು! ಮಾನ ಉಳಿದ್ರೆ ಸಾಕಾಗಿದೆ, ಅಂಥದ್ರಲ್ಲಿ Status ಯಾವ್ದೋನಿಗ್ ಬೇಕು! . .ಅಲ್ಲ, Officeನಲ್ಲಿ ಸರ್ಯಾದ್ Staff ಇಲ್ಲ. ನನ್ಗೊಂದ್ ಒಳ್ಳೇ Conveyance ಇಲ್ಲ. ಬ್ರಹ್ಮನ್ ಹಂಸಾನೂ, ವಿಷ್ಣೂನ್ ಗರುಡಾನೂ ನೋಡಿದ್ರೆ ನನಗ್ ನಾಚಿಕೆಯಾಗುತ್ತೆ. ರುದ್ರಸಾಹೇಬ್ರು ಗೂಳೀಮೇಲ್ಹೋದ್ರೂ ಗಂಟೇಗ್ ಹತ್ಮೈಲಿಯಾದ್ರೂ ಹೋಗ್ತಾರೆ; ಯಾಕೇಂದ್ರೆ ಅದು ಓಡುತ್ತೆ........ನಾ ನೋಡಿದೀನಿ .......... ಎಲ್ಲಾರ್ದೂ ವಾಸಿ, ಆದ್ರೇ ನಂಗೇ ಈ ಮುಡ್ಡಾಗ್ದ್ ಕೋಣ ಕಟ್ಟಿದಾರೆ! ಭೂಲೋಕ್ದಲ್ಲಿ 'ಎಮ್ಮೆ' ಅಂದ್ರೆ ನಿಧಾನ್ವಾಗ್ ನಡ್ಯೋದೂಂತ ಗಾದೆ ಆಗ್ಬಿಟ್ಟಿದೆಯಂತೆ, ನೀ ಕೇಳಿರ್ಬಹುದು........ .

ಚಿತ್ರಗುಪ್ತ—ಓಹೋ!........ಭೂಲೋಕ್ದಲ್ಲೇನು, ಮೊನ್ನೆ ನಮ್ ರುದ್ರ ಸಾಹೇಬ್ರೇ ಕರಾಳಂಗೆ "ಎಮ್ಮೆ ಹಾಗ್ಬರ್ಬೇಡ, ಬೇಗ್ಬಾ" ಅಂದ್ರು!

ಯಮ—ನೋಡ್ದ್ಯಾ.... ........ಅವರ್ಗೇ ಗೊತ್ತಿದೆ, ಈ ಗಂಡೆಮ್ಮೆ Conveyance ಮರ್ವಾದ್ಗೇಗೂ ಬ್ಯಾಡಾಂತ! ಅವರ್ದೂ ಮಳ್ಗಾಲ್ದಲ್ಲಿ ಇದರ್ಜೊತೆ ಹೆಣಗಾಡೋದು ಯಾರಾರ್ಗೂ ಬ್ಯಾಡ........ಅದ ರ್ಮೇಲ್ ಸವಾರಿ ಮಾಡೋನ್ಗೇ ಗೊತ್ತು ಆ ಸುಖ! ನೀರ್ತುಂಬಿರೊ ಹಳ್ಳ ಗಿಳ್ಳ ಸಿಕ್ಬಿಟ್ರಂತೂ ನನ್ಗತಿಗತಿಯೇ! ಈಗದಕ್ಕೇ ತಡವಾದ್ದು ........ಮಳೆ ಬಂದ್ರೆ ಮಲಕ್ಕೊಂಡೇ ಬಿಡುತ್ತೆ ಮುಂಡೇದು! ಇನ್ನೋ........ಅದಕ್ ಸರ್ಯಾಗಿ, ನಮ್ಮ Emergency Exe-

cutiveನೋರ್ ಕೂಡ ಸೋಮಾರಿಗಳಾಗ್ತಾ ಇದಾರೆ. ಈಗ.......
ಹಾಗೇ ಖೂನಿ ಜೈಲ್ನೂ ಆತ್ಮಹತ್ಯದ್ ವಾರ್ಡ್‌ನೂ ನೋಡ್ಕೊಂಡ್
ಬರ್ತಿದ್ದೆ. ದಾರೀಲಿ ಪಾಶ ಸಿಕ್ಕ. ಒಳ್ಳೇ ಸಮಯಕ್ಕೇ ಸಿಕ್ದಾಂ
ದ್ಕೊಂಡು ಅವನಿಗ್ಹೇಳ್ದೆ: ‘ ಲೋ, ನೋಡಪ್ಪ, ಈಗ War
Campaign ಮುಗ್ದ್ ಹೋಯ್ತು. ಇನ್ನ Disease
Campaign ಷುರು ಮಾಡ್ಬೇಕೂಂತ ತೀರ್ಮಾನ್ವೂ ಆಯ್ತು;
ಷುರ್ವೂ ಆಯ್ತು........ಆದ್ರೇ....ನೀನೇನ್ ನಮ್ಗ ಒಳ್ಳೇ ಹೆಸ್ರು
ತರೋಲ್ಲಾಂತ್ ಕಾಣುತ್ತೆ ’ ಅಂತ ಅಂದೆ. ಅದಕ್ಕವನು ‘ ಇಲ್ಲಾ
ಸಾರ್, ನಾನ್ಬಹ್ಳ interest ತೊಗೊಂಡ್ಕೆಲ್ಸ ಮಾಡ್ತಾ ಇದೀನಿ.
ಏನ್ಮಾತ್ರ್ಡ್ಲಿ, ಈಗಾಗ್ಲೆ ನಾನ್ ಅಲ್ಲಲ್ಲೆ Plagueಉ, Cholera,
Sprinkle ಮಾಡ್ದೆ. ಆದ್ರೇ ನಮ್ Troopsಉ honest
ಆಗ್ ಕೆಲ್ಸ ಮಾಡ್ತಿಲ್ಲ. ಬಹ್ಳ ಹೆದರ್ತಾರೆ ’ ಅಂದ. Plague
Troopಉ, Cholera Troopಉ, Malaria Troopಉ–
ಎಲ್ಲ Troopಗಳೂ ಜನಕ್ ಹೆದರ್ತಾರಂತೆ ನೋಡು, ಇದೇನ್
ನಗ್ಬೇಕೊ, ಅಳ್ಬೇಕೊ ! ನರಮನುಷ್ಯರ್ ಹಾಕೋ Injection,
Inoculationಗೇ ಇವ್ರು ಹೆದರ್ಬಿಟ್ಟು ಬರೀಕೈಲ್ ವಾಪಸ್
ಬಂದ್ಬಿಟ್ರೆ ನಮ್ Department ಗತಿಯೇನು !........ ?........
ನಮ್ ಮಾನ ಉಳಿಯುತ್ತ್ಯೆ !........ಹೋಗ್ಲಿ. ಇಷ್ಟೆಲ್ಲ ತೊಂದ್ರೇನೂ
ಸಹಿಸ್ಕೊಂಡು ರಾತ್ರಿ ಹಗಲು ಕೆಲಸ ಮಾಡೋಣಾಂದ್ರೆ ನಮ್ಗ್ಬರೋ
Benefit ಅದ್ರೂ ಏನು ?...ಆ್ಞ ?

ಚಿತ್ರಗುಪ್ತ——ಹೌದು ಸಾರ್, ನಾನೂ ಅದೇ ಯೋಚ್ನೆ ಮಾಡ್ತಿದ್ದೆ. ಬಹ್ಳ ಕಷ್ಟ ಸಾರ್, ಈ Positionನಲ್ಲಿರೋದು........ಆದ್ರೇ........ಸ್ವಲ್ಪ ಪ್ರಯತ್ನಪಟ್ರೆ, Benefitಗೇನ್ ಬಾಧಕವಿಲ್ಲಾಂತ್ ಕಾಣುತ್ತೆ......

ಯಮ——ಅದ್ಯಾಕ್ಹಾಗೆ ಚಿತ್ರಗುಪ್ತ? ರುದ್ರ, ವಿಷ್ಣು ಇವರುಗ್ಳಾದ್ರೆ ಇಪ್ಪತ್ತೆಂಟ್ ಅವತಾರದ್ವೇಷ ಹಾಕ್ಕೊಂಡು ಯಾರ್ಗೂ ಕಾಣ್ದಾಂಗ್

ಅಲ್ಲಿ ಇಲ್ಲಿ ಎಲ್ಲಾ ಕಡೇಂದ್ಲೂ ಬಾಜ್ಕೊಳ್ತಾರೆ........ಆದ್ರೇ....
ನಮ್ ಸ್ಥಿತಿ ನೋಡು, ಗೊತ್ತಾಗ್ಬಿಟ್ರೆ........ಆಮೇಲೆ ತಲ್ಯೇ
ಹೋಗ್ಬಿಡುತ್ತೆ.

ಚಿತ್ರಗುಪ್ತ—ಇಲ್ಲ ಸಾರ್........ಪ್ರಯತ್ನ ಪಟ್ರೆ ಗಾಳೀಗೂ ತಿಳೀದ್ಹಾಗೆ
ಕೆಲ್ಸ ಮಾಡ್ಕೊಂಡ್ ಹೋಗ್ಬಿಡ್ಬಹ್ದು......ಅದೂ ಅಲ್ದೆ ಈ Office
ನಲ್ಲಿರೋಷ್ಟು Scope ಇನ್ನೆಲ್ಲಿದೆ ಸಾರ್........ಮಾಡ್ಬಹ್ದು ಸಾರ್,
ತಿಳೀದ್ಹಾಗ್ ಮಾಡ್ಬಹ್ದು.........ಅದೂ ಅಲ್ದೇ........ಒಂದೊಂದ್ಸಲ
ಅನ್ಸುತ್ತೆ ಸಾರ್, (ನಿಟ್ಟುಸಿರು ಬಿಟ್ಟು) ತ್ರಿಮೂರ್ತಿಗಳ್ಗೂ ಭೂಲೋ
ಕ್ದಲ್ಲಿ ದೇವಸ್ಥಾನಗಳಿರೋವಾಗ ತಮಗೊಬ್ಬರಿಗ್ಮಾತ್ರ....ಒಂದ್....
ಪುಟ್ ಗುಡಿಯೂ ಇಲ್ಲಾಂದ್ರೆ.... ...ತುಂಬ ದುಃಖವಾಗುತ್ತೆ ಸಾರ್
........ಛೆ, ಛೆ, ಅನ್ಯಾಯ ಸಾರ್ ....

ಯಮ—(ನಿಟ್ಟುಸಿರು) ಏನ್ಮಾಡ್ಲಿ, ಆಸೆ ಇದ್ರೂ ನಡ್ಸೋಕ್ ಶಕ್ತಿ ಇಲ್ಲಾ
ಚಿತ್ರಗುಪ್ತ.

ಚಿತ್ರಗುಪ್ತ—ಯಾಕ್ ಸಾರ್ ಯೋಚ್ನೆ ಮಾಡ್ತೀರಿ....ತಾವ್ ಅಪ್ಣೆ ಕೊಟ್ರೆ
ನಾನ್ ಪ್ರಯತ್ನ ಮಾಡ್ ನೋಡ್ತೀನಿ ಸಾರ್....ಗಳಿಗ್ಗೊಂದ್ Case
ಬರೋವಾಗ ಯಾಕ್ ಯೋಚ್ನೆ ಮಾಡ್ಬೇಕು ಸಾರ್ ?

ಯಮ—ಏನೋಪ್ಪ.... ಹ್ನ-ಅದ್ಹೋಗ್ಲಿ. ಈಗ....ಸಂಜೆ ಯಾರ್‍ಯಾರನ್
ತರ್ಬೇಕು ?

ಚಿತ್ರಗುಪ್ತ- (ಪುಸ್ತಕ ತೆಗೆದು ನೋಡುತ್ತ) ಆ್ಹ....P. M. ಲಕ್ಷ್ಮಯ್ಯನ್ನ....

ಯಮ—ಪಾಪ, **Poor Man** ! ನೋಡ್ದ್ಯಾ ! ನಮ್ ಗಿರಾಕಿಗಳೆಲ್ಲ
ಇಂಥವ್ರೇ.... ಹೀಗಿರೋವಾಗ ಏನೇನೋ ಯೋಚ್ನೆ ಮಾಡ್ತೀಯ
ನೀನು !........

ಚಿತ್ರಗುಪ್ತ—ಇಲ್ಲ ಸಾರ್, ಆವಾಗ....ಹೇಳಿದ್ನಲ್ಲ, ಆ ವಿಷ್ಯ ಹೊಳ್ದಿದ್ದು ಈ
ಹೆಸರ್ ನೋಡ್ದಾಗ್ಲೆ !....ನಾರಾಯಣ್ಪುರದಲ್ಲಿರೋ ಶಂಕರಬೀದೀಲಿ

ಒಬ್‌ದೊಡ್‌ಸಾಹುಕಾರ ಇದಾನಲ್ಲ....ಅವನ್ಹೆಸ್ರೂ ಲಕ್ಷ್ಮಯ್ಯನೆ....
ಆದ್ರೇ ಅವನು R. M. ಲಕ್ಷ್ಮಯ್ಯ! ಅವನ್ಮನೇ ಪಕ್ಕದ್ಲೇ ಈ
P. M. ಲಕ್ಷ್ಮಯ್ಯ ಇರೋದು. ಇವನು ಬಹ್ಳ ಬಡ್ವ, ಮನೇ
ತುಂಬ ಮಕ್ಳು, Primary School ಮೇಷ್ಟ್ರಾಗಿದ್ದ....
ವಯಸ್ಸೇನೋ ಆಗಿದೆ....ಆದ್ರೇ, ಇವ್‌ನಿಂದ ನಮ್ಗೇನ್ ಪ್ರಯೋಜ್ನ
ಆಗೊಲ್ಲ. ಆದ್ರಿಂದ....ನಾವು....ಈಗ....ಒಂದ್ ಉಪಾಯ ಮಾಡಿದ್ರೆ
....ಏನೊ, ನಮ್ ಅದೃಷ್ಟ ಪರೀಕ್ಷೆ.......

ಯಮ—ಏನ್ಮಾಡ್ಬೇಕೂಂತೀಯ?

ಚಿತ್ರಗುಪ್ತ—P. ಹೊಟ್ಟೇಗೊಂದ್‌ಗೀಟೆಳ್ದು—ಊರ್ಧ್ವೇಲ್ ಕೊಟ್ಟ್ಬಿಟ್ಟ್ರೆ—
ಅದನ್ನ R. ಮಾಡ್ಬಿಡೋಣ; ಆ ಸಾಹುಕಾರನ್ನ—R. M. ಲಕ್ಷ್ಮ
ಯ್ಯನ್ನ—ತರ್‍ಸ್ಬಿಡೋಣ....ಅವನು ಒಳ್ಳೆ ಭಾರಿ ಸಾಹುಕಾರ.
ಯುದ್ಧ ಬೇರೆ ಬಂದಿದ್ರಿಂದ ಐದ್ ವರುಷ್ದಲ್ಲಿ ಐವತ್‌ಲಕ್ಷ
ರೂಪಾಯ್ ಸಂಪಾದ್ಸಿದಾನೆ! ವಯಸ್ಸೂ ಚಿಕ್ದು....ಮನೇಲಿ
ಎಳೇ ಹೆಂಡ್ತಿ....ಮಗ ಪೆದ್ದು....ಸರಿ....ಕೂತ್ಕೊಂಡ್ ತಿನ್ನೊ ಭಾವ್
ಮೈದ್ನ ಬ್ಯಾರೆ ಇದಾನೆ, Parasiteಉ. ಆದ್ರಿಂದ ಇಲ್ ಬಂದು
ಆತ ಗೋಳಾಡೇ ಗೋಳಾಡ್ತಾನೆ. ಆವಾಗ ನಾವು ಸ್ವಲ್ಪ ಬಿಗಿ
ಯಾಗಿದ್ರೆ, ನಮ್ಕೆಲ್ಸ ಸುಲಭವಾಗಾಗ್ಹೋಗುತ್ತೆ...

ಯಮ—ನಿನ್ನುಪಾಯ ಏನೋ ಚೆನ್ನಾಗಿದೆ....ಆದ್ರೇ ಈ ಕೆಲ್ಸಾನ ಬಹ್ಳ
ಹುಷಾರಾಗ್ ಮಾಡ್ಬೇಕು. ಯಾಕೇಂದ್ರೆ ತಿದ್ದೋ ಕೆಲ್ಸ ನೋಡು.
ನಾಳೆ ದೊಡ್ ಸಾಹೇಬ್ರು ನೋಡ್ತಾರೆ. ವಿಷ್ಣು, ಬ್ರಹ್ಮ ಇವರ್ಕಣ್ಗೆಲ್ಲ
ಬಿದ್ಬಿಟ್ರೆ ನಮ್ ಗತಿಯೇನು! ಆದ್ರಿಂದ...

ಚಿತ್ರಗುಪ್ತ—ಛೆ, ಛೆ, ಹುಷಾರಾಗೆ ಮಾಡ್ಬೇಕು. ಆದ್ರಿಂದ್ಲೇ ನಾವು
Executive Partyಗ್ ಕೊಡೋ Listನಲ್ ಮಾತ್ರ
P ನ R ಮಾಡಿಟ್ಕೊಳ್ಳೋಣ. ತಿದ್ದಿದ್ಕಡೆ Intial ಹಾಕೋದೇ

ಬ್ಯಾಡ. ಯಾಕೇಂದ್ರೆ, ಸಮಯಕ್ ತಕ್ಕ್ಹಾಗ್ ಜಾರ್‍ಕ್ಕೊಳ್ಳೋ ಹಾಗಿರಬೇಕು. ಆಸಾಮಿ ಏನಾದ್ರೂ ನಮ್ಗೆ ಉಪ್‍ಯೋಗ್ವಾದ್ರೆ ಕೈತಪ್ R ಆಗ್ಹೋಗಿದೆ, ಅದ್ P ೯ ನೇ ಎಂದ್ಬಿಟ್ರಾಯ್ತು !.... Original ನಲ್ ಇದ್ದಾಗೇನೇ ಕೆಲ್ಸಾನೂ ನಡ್ಹೋಗುತ್ತೆ.... ನಮ್ಗೂ ಕಿಂಚಿತ್........

ಯಮ—ನೀವೇಳೋದೆಲ್ಲ ಸರಿ, ಆದ್ರೇ ಬಹ್ಳ ಹುಷಾರಾಗ್ Manage ಮಾಡ್ಬೇಕು....

ಚಿತ್ರಗುಪ್ತ—ತಾವ್....ನನಗ್ ಅಪ್ಣೆ ಕೊಡೀ ಸಾರ್....ನಾ ಎಲ್ಲ ಸಲೀಸಾಗ್ ಮಾ....

ಯಮ—ಏನೋಪ್ಪ....ನಾವೇನ್ಮಾಡಿಲ್ವೆ !........ಚೆನ್ನಾಗ್ ಅನುಭವ ಆಗಿದ್ಯಲ್ಲ! ಇಲ್ ಬಂದಾಗೇನೇನೋ ಹೇಳ್ತಾರೆ........ಆಮೇಲೆ........ ಗೊತ್ತೇ ಇದೆ! ...ಹ್ಞ... ....ಎಲ್ಲ........ಹೋಗ್ಲಿ, ಆ ಕರಾಳನ್ನೇ ಕಳ್ಸೋಣ : ಅವನೇ ವಾಸಿ, ಇದ್ದದ್ರಲ್ಲಿ ಸ್ವಲ್ಪ ಗುಟ್ಟಾಗಾದ್ರೂ ಕೆಲ್ಸ ಮಾಡ್ತಾನೆ....ಕರಾಳಾ !

ಕರಾಳ—(ಪ್ರವೇಶಿಸಿ) ಬಂದೆ ಬುದ್ದಿ

ಯಮ- ಹೊರ್ಗೆ ಯಾರಾರ್ ಬಂದಿದಾರೊ ?

ಕರಾಳ—ಜೀವಾರಿ ಒಬ್ನೇ ಬುದ್ದಿ. ಒಂದ್ ಹುಡ್ಗೀ ಕರ್‍ಕ್ಕೊಂಡ್ ಬಂದವ್ನೆ. ಅದೇನೊ ತಮ್ಮನ್ನೇ ಕೇಳ್ಬೇಕಂತೆ, ಕಾಯ್ತಾ ಕುಂತವ್ನೆ....

ಯಮ—ಹಾಗಾದ್ರೇ....ಅವನಿಲ್ಲಿರ್‍ತಾನೆ ; ಅವನ್ಕಳ್ಸಿ, ನೀನು ನಾರಾಯಣ್ಪುರ್‍ದ್ ಸಾಹುಕಾರ್‍ರಿದಾರಲ್ಲ—R. M. ಲಕ್ಷ್ಮಯ್ಯನೋರು—ದೊಡ್ಮನ್ಯೋರು ! ಅವರನ್ಕರ್‍ಕೊಂಡ್ಬಾ, ಬೇಗ್‍ಬಾ, ಹೋಗು.

ಕರಾಳ—ಆಗ್ಲಿ ಬುದ್ದಿ (ಹೊರಡುವನು)

(ಜೀವಾರಿಯು ಹದಿನೇಳು ವರುಷದ ಹುಡುಗಿಯೊಡನೆ ಪ್ರವೇಶಿಸುವನು)

ಜೀವಾರಿ—(ನಮಸ್ಕರಿಸಿ) ನಮಸ್ಕಾರ ಬುದ್ದಿ.

ಯಮ--- ಏನೋ ಅದು ?

ಜೀವಾರಿ- -ಬುದ್ಧೀ, ಈಗ ಒಂದ್ ಸಮಸ್ಯೆ ಎದ್‌ಬುಟ್ಟೈತೆ ಬುದ್ಧಿ ನಂತಲೀ ಒಳ್ಗೆ. ಈ ಉಡ್ಗಿ....ಮೊದ್ಲು ಆತ್ಮಅತ್ಯ ಮಾಡ್ಕೊಳ್ಬೇಕೂಂತ ಒಂಟಿತ್ತು. ಕೆರೇದಂಡೇಮೇಲ್ ನಿಂತಿತ್ತು. ಇನ್ನೇನ್ ಬೀಳೋದ್ರಲ್ಲಿತ್ತು. ನಾನೂ ನನ್ಬಲೆ ಬೀಸಿದ್ದೆ....ಆದ್ರೇ ಯಾರ್‍ಯಾರೋ ಬಂದ್ಬುಟ್ಟೆ ಈ ಉಡ್ಗೀನ ಎಳ್ಕೊಂಡ್ ಓಗ್ಬಿಟ್ರು. ಆಮೇಲೆ....ಜಡ್ಜೀಮುಂದ್ ಇಚಾರ್‍ಣೆ ನಡ್ಸಿ, ಈ ಉಡ್ಗಿ ಆತ್ಮಅತ್ಯ ಮಾಡ್ಕೊಳ್ಳೋಕ್ ಒಂಟಿದ್ರಿಂದ ಫಾಸೀಸಿಕ್ಸೇಂತ ಅಂದ್ಬಿಟ್ರು. ನಾನು ಫಾಸೀಮೇಲ್ ಬಲೆ ಬೀಸಿ ಇದನ್ ಎತ್ಕೊಂಡ್‌ಬಂದಿನ್ನಿ. ಈಗsss ಈ ಉಡ್ಗೀನ ಆತ್ಮಅತ್ಯದ್ ವಾರ್ಡಿಗ್ ಸೇರಿಸ್ಬೇಕೋ ಅಥ್ವಾss ಖೂನಿಜೈಲಿಗ್ ಸೇರಿಸ್ಬೇಕೋ ಅಪ್ಪಣೆ ಯಾಗ್ಬೇಕು ಮಾಸಾಮಿ.

ಯಮ—ಓಹೋ! ವಿಚಿತ್ರವಾಗಿದೆ ಚಿತ್ರಗುಪ್ತ, ಈಗೇನ್ಮಾಡ್ಬೇಕಾಗುತ್ತೆ ? (ಯೋಚಿಸಿ) ಬಲ್ವಂತ್ ಮರಣದಿಂದ ಬಂದ್ ಜೀವಿಗಳ್ಗೆ ನಮ್ಮಲ್ಲಿ ರೋದ್ ಎರಡು : ಒಂದ್ Wardಉ, ಒಂದ್ Jailಉ. ಈಗ್ ಬಂದಿರೋ ಈ ಹುಡ್ಗಿ ಬಲ್ವಂತ್‌ವಾಗೇನೋ ಬಂದಿದೆ, ಆದ್ರೇೀ.... ಮೊದ್ಲು ಆತ್ಮಹತ್ಯಮಾಡ್ಕೊಳ್ಳೋಕ್ ಇಷ್ಟಇದ್ದದ್ರಿಂದ ವಾರ್ಡಿಗ್ ಸೇರ್‍ಸ್ಬೇಣ್ವೋ ಅಥ್ವಾsss....

ಚಿತ್ರಗುಪ್ತ—ಅಯ್ಯೋ ಅದ್ಹ್ಯಾಗ್‌ಸಾಧ್ಯ ಸಾರ್? ಆತ್ಮಹತ್ಯ ಮಾಡ್ಕೊಳ್ಳೋವಾಗ ಸಾಯ್ಲಿಲ್ವಲ್ಲ. ನಮ್ಗೆ ಸತ್ತಿದ್ ಹೇಗೆ ಅನ್ನೋದ್ ಮುಖ್ಯ. ಈಗ ಸತ್ತಿರೋದು ಫಾಸಿಯಿಂದ. ಆದ್ದರಿಂದ ನಮಗ್ ಫಾಸಿ ಮುಖ್ಯ. ವಾರ್ಡಿಗ್ ಸೇರ್‍ಸೋ ಹಾಗೇ ಇಲ್ಲ....ಖೂನಿಮಾಡ್ಕೊಂಡಿದ್ರೆ ಜೈಲಿಗ್ ಸೇರಿಸ್ಬಹುದಿತ್ತು....ಆದ್ರೇೀ....

ಯಮ—ಆದ್ರೆ ಏನ್ ಗೀದ್ರೆ ! ಇನ್ನೊಬ್ಬರ್ ಬಲ್ವಂತ್‌ದಿಂದ ಬಂದಿದಾಳೆ. ಅದ್ ಖೂನೀನೇ—**Judicial Murder**ಉ, ಅಷ್ಟೆ! ಜೈಲ್ಗೇ ಸೇರಿಸ್ಬೇಕು. (ಜೀವಾರಿಗೆ)ಹ್ಞು, ಹೋಗು, ಕರ್ಕೊಂಡ್ ಹೋಗ್ಸೇರ್‍ಸು.

(ಜವಾನ ಮತ್ತು ಹುಡುಗಿ ಹೋಗುವರು. ತೆರೆಯ ಹಿಂದೆ "ಯಾಕ್ ಸತಾಯಿಸ್ತೀರಿ, ಬಸ್ರಿ ಸಾಹೇಬ್ರೆ ಹೇಳಿದಾರೆ...ಬಿಡೋ...." ಎಂಬ ಕೂಗು. ಅದಕ್ಕೆ ಉತ್ತರವಾಗಿ R.M. ಲಕ್ಷ್ಮಯ್ಯನವರು ತೆರೆಯ ಹಿಂದೆಯೇ ನಿಂತು 'ನಡೀ, ನಡೀ' ಅವರ್ ಸಾಹೇಬ್ರು ತ್ರಾನೇ ನಡೀ, ನಾನಲ್ಲಕಣಯ್ಯಾಂದ್ರೆ .... ನಡೀ...." ಎಂದು ಅರಚುವರು.) ಇದೇನಿದು ಗಲಾಟೆ!.... ಓಹೋ, ಆಸಾಮಿ ಬಂದ್ಹಾಗಿದೆ ...

ಚಿತ್ರಗುಪ್ತ- ಓಹೋ ಬಂದ್ಬಿಟ್ಟ!

ಯಮ- ಏನೋ ಅದು ಗಲಾಟೆ?

(ಕರಾಳ ಮತ್ತು R. M. ಲಕ್ಷ್ಮಯ್ಯನವರ ಪ್ರವೇಶ)

R. M. ಲಕ್ಷ್ಮಯ್ಯ—(ನೇರವಾಗಿ ಯಮರಾಯರ Table ಬಳಿಗೆ ಬಂದು ನಮಸ್ಕರಿಸಿ) ನಮಸ್ಕಾರ ಮಹಾಸ್ವಾಮಿ.... ಈ ಬಡವನ್ ಬೇಡ್ಕೆ ಲಾಲಿಸ್ಬೇಕು ಮಹಾಪ್ರಭೋ. ನಾನೆಷ್ಟೆಷ್ಟೋ ಹೇಳ್ದೆ, ನಿಮ್ಮಾಳ್ಗೆ.... ಆದ್ರೂ ಕೇಳ್ಲಿಲ್ಲ; ನನ್ನ ಕರ್ಕೊಂಡ್ ಬಂದ್ಬಿಟ್ರು....ನಾನಲ್ಲಕಣಯ್ಯಾ ಅಂತ್ ಎಷ್ಟ್ ಬಡ್ಕೊಂಡೆ ಮಹಾಸ್ವಾಮಿ, ಆದ್ರೂ ಕೇಳ್ಲೇ ಇಲ್ಲ....ನನ್ಗಿನ್ನೂ ನಲವತ್ತೊರ್ಷ....ಮೊನ್ನೆ ತಾನೆ ನಮ್ಮನೇಗ್ ಬಂದಿರೋ ನನ್ಹೆಂಡ್ತಿ... ಆರ್ವೇವ್ರು ....ಇನ್ನೂ ಹುಡ್ಗೀರೊರ್ಷ....ಯಾವ್ಯಾವ್ ಮೂಲೇಲ್ ಏನೇನಿದೆ, ಎಷ್ಟೆಷ್ಟಿದೆ, ಎಂಬೋದ್ ಕೂಡ ತಿಳೀದು....ನಮ್ ಹುಡ್ಗನ್ಗೆ (ಸ್ವಲ್ಪ ದುಃಖ)—ನನ್ಮಗ ಸ್ವಾಮಿ ...ಅವನ್ಗೆ ಇನ್ನೂ ಬುದ್ಧೀನೇ ಬೆಳ್ದಿಲ್ಲ....ಈಗೀಗ್ ಸುಮಾರಾಗ್ ಮಾತಾಡ್ತಾನೆ.....ಮನೇಲ್ ಸರ್ಯಾಗ್ ನೋಡ್ಕೊಳ್ಳೋರ್ ದಿಕ್ಕಿಲ್ಲ. ಆದ್ರಿಂದ ತಾವು ದಯ್ವಿಟ್ಟು.... ನನಗೆ ಒಂದ್ ಹತ್ತೊರ್ಷನಾದ್ರೂ Extension ಕೊಟ್ರೆ, ತಮ್ ದಯ್ದಿಂದ ಭೂಮೀಗ್ ಹೊರ್ಟ್ಹೋಗ್ತೀನಿ ಸ್ವಾಮಿ....

ಯಮ—(ಮರುಗುಟ್ಟಿ ನೋಡಿ) ಛೆ, ಛೆ, ! ಏನ್ರಿ ಇದು....ಇದೇನ್ ತಮಾಷೇನೇನ್ರಿ? ಏನ್ ಭೂಲೋಕ ಕೆಟ್ಹೋಯ್ತೆ!....ಅದೆಲ್ಲ ಆಗೊಲ್ರಿ....

R. M. ಲಕ್ಷ್ಮಯ್ಯ—ಅಯ್ಯೋ ಹಾಗನ್ಬಾರ್ದು ಸಾರ್, ತಮ್ಮನ್ನ್ ನೆಚ್ಕೊಂಡೇ ಬಂದಿದೀನಿ....

ಯಮ—ಛೆ, ಛೆ, ಅದಾಗೊಲ್ರಿ....

R. M. ಲಕ್ಷ್ಮಯ್ಯ—ತಮ್ಮಿಂದ ಒಂದ್ ಸಂಸಾರ ಉಳೀಬೇಕು ಸಾರ್.... ಹಾಗನ್ಬಾರ್ದು.... ತಾವು.... ಹೇಗಾದ್ರೂ ಮಾಡಿ ಈ ಬಡ್ವನ್ಮೇಲೆ ಒಂದ್ಸ್ವಲ್ಪ ಕರುಣೆ....

ಯಮ—(ರೇಗಿ) ಏನ್ ಯಾರ್ತ್ರಲೆ ಕಳೀಬೇಕೂಂತ್ ಮಾಡ್ತಿದೀರ್ರಿ? ಹುಡ್ಗಾಟನೇನ್ರಿ ಇದು! ನಮ್ಗೇನ್ ಹೇಳೋರ್ ಕೇಳೋರ್ ಇಕ್ಕಿಲ್ವೆ? ನಾನ್ ಮಾಡಿದ್ದೇ ಮಾಡಿದ್ದೂಂತ್ ತಿಳ್ಕೊಂಡಿದೀರೇನು? ದೊಡ್ ಸಾಹೇಬ್ರು ನೋಡ್ತಾರೆ, ವಿಷ್ಣು ನೋಡ್ತಾರೆ, ಬ್ರಹ್ಮ ನೋಡ್ತಾರೆ.... ಅದ್ಹ್ಯಾಗ್ರಿ Extension ಕೊಡೋಕ್ ಸಾಧ್ಯ? ಅವರ್ ಕಣ್ಣಿಗ್ ಬಿದ್ಬಿಟ್ರೆ ಕೆಲ್ಸದ್ ಜೊತೇಲ್ ತಲೇನೂ ಹೋಗ್ಬಿಡುತ್ತೆ, ಅಷ್ಟೆ.... ಲೋ, ಕರಾಳ! (ದೃಷ್ಟಿಯನ್ನು ಬೇರೆಯ ಕಡೆ ಹೊರಳಿಸಿದಂತೆ ನಟಿಸಿ) ಈ File ತೊಗೊಂಡ್ ಹೋಗೋ.... (ಈ ಕಡೆ) ನಿಮ್ಮಂಥವ್ರಿಂದ ಇದೇ ಉಪ್ಕಾರ ನಮ್ಗೆ....(ಆ ಕಡೆ) ಲೋ ಕರಾಳ....ಅದರಲ್ಲಿ Total ಸರ್ಯಾಗಿಲ್ಲಾಂತ ಹೇಳೋ....

[ಕರಾಳ ಸಮಯೋಚಿತವಾಗಿ ಕಾಗದ, Fileಉಗಳನ್ನು Table ಇಂದ Tableಇಗೆ ಒಯ್ಯುವುದು, ಆಗಾಗ ಹೊರಗೆ ಹೋಗಿ ಒಳಗೆ ಪುನಃ ಪ್ರವೇಶಿಸುವುದು, ಮುಂತಾದುವುಗಳನ್ನು ಮಾಡುತ್ತಿರುವನು]

R. M. ಲಕ್ಷ್ಮಯ್ಯ—ಸಾರ್, ದಯ್ವಿಟ್ಟು, ಹಾಗನ್ಬಾರ್ದು ಸಾರ್. ಇದೊಂದ್ ಹತ್ವರ್ಷ Sanction ಮಾಡ್ಬಿಡಿ. ಆಮೇಲೆ ತಾವ್ಯಾರನ್ನೂ ಕಳಿಸೋದ್ ಕೂಡ ಬ್ಯಾಡ. ನಾನೇ ಬಂದ್ಬಿಡ್ತೀನಿ. ಹ್ಯಾಗಿದ್ರೂ ರಸ್ತೆ ಕೂಡ ಗೊತ್ತಿದೆ....ದಯ್ವಿಟ್ಟು....

ಯಮ—(ರೇಗಿ) ಆಗೊಲ್ಲಾಂತ್ ಒಂದ್ಸಲ ಹೇಳಿದ್ಮೇಲ್ ಗೊತ್ತಾಗೊಲ್ವೇ

ನ್ರಿ? ಯಾವ್ ಭಾಷೇಲ್ರಿ ನಾ ಹೇಳ್ತಾ ಇರೋದು....ಕನ್ನಡ ಗೊತ್ತಾ ಗಲ್ವೆ?

R. M. ಲಕ್ಷ್ಮಯ್ಯ—ಏನೋ ಸಾರ್, ತಾವ್ ಮನಸ್ಮಾಡಿದ್ರೆ ಯಾವ್ದು ತಾನೇ ಆಗೊಲ್ಲ. ತಮ್ ಕರುಣೆ ಇಲ್ದಿದ್ರೆ, ನಾನು ಇದುವರ್ಗೂ ಮಾಡಿದ್ ಶ್ರಮವೆಲ್ಲ ವ್ಯರ್ಥವಾಗುತ್ತೆ. ಹೆಚ್ಚೇನೂಬ್ಯಾಡ, ತಾವ್ ದಯ್ವಿಟ್ಟು ....ಒಂದ್ ಹತ್ವರ್ಷ—ಯುಪ್ಪತ್ತೈತ್ ಹತ್ವರ್ಷ—ಮುಂದಕ್ ಹಾಕ್ಕೊಂಡ್ರೆ ಸಾಕು. ಅಷ್ಟೊತ್ತಿಗ್ ನಮ್ ಹುಡುಗನ್ಗೂ ಸ್ವಲ್ಪ ಬುದ್ಧಿ....

ಯಮ—(ಕೋಪ) ಏನ್ರಿ ಇದು ನಿಮ್ಗೇನ್ ಜ್ಞಾನಗೀನ ಇದ್ಯೋ ಇಲ್ವೊ? (ನಿಂತು)....ಆಗೊಲ್ಲಾಂತ್ ಒಂದ್ಸಲ ಹೇಳಿದ್ಮೇಲ್ ಸುಮ್ನೆ ಹೊರಟ್ಹೋಗ್ಬೇಕು....

R. M. ಲಕ್ಷ್ಮಯ್ಯ—ಅಯ್ಯೋ ತಾವ್ ಹಾಗನ್ಬಾರ್ದು ಸಾರ್, ದಯ್ವಿಟ್ಟು ...

ಯಮ—(ತುಂಬ ಕೋಪ) ಸಾಧ್ಯವಿಲ್ಲ ಕಂಡ್ರಿ .... ನಮ್ಗೇನ್ ಬೇರೆ ಕೆಲ್ಸ ಇಲ್ವೇನು? ಸದಾ ಈ ಹಾಳ್ ಜೀವಿಗಳ್ ಗೋಳ್ಕೆ ಕೇಳ್ತಾ ... (ಬೇರೆಯ ಕಡೆ ದೃಷ್ಟಿಯಿಟ್ಟು) ಲೋ ಕರಾಳ,....ಆ ನಾಶ....

R. M. ಲಕ್ಷ್ಮಯ್ಯ—(ಅತಿ ವಿನಯದಿಂದ) ಸಾರ್, ಹ್ಯಾಗಾದ್ರೂ ಮಾಡಿ ದಯ್ವಿಟ್ಟು....

ಯಮ—(ಮಿತಿಮೀರಿದ ಕೋಪದಿಂದ) ಹೋಗ್ತೀರೋ ಇಲ್ರಿ ಇಲ್ಲಿಂದ ...?.... ನಡೀರಿ ನಡೀರಿ ಇಲ್ಲಿಂದ ...(ತೊದಲುತ್ತ) ಆ....ಹೆ....ಡ್....ಕ್ಲಾ.... ರ್ಕ್....ಹತ್ರ....ಅದೇನೇನ್ ಬೇಕೋ ಒದರ್ಕೊಳ್ರಿ, ನಡೀರಿ....

(ಯಮಸಾಹೇಬರು ಒಳಗೆ ಹೋಗುವರು)

## Head Clerk ಚಿತ್ರಗುಪ್ತನ Tableಉ

[ಚಿತ್ರಗುಪ್ತನ ಹತ್ತಿರ R. M. ಲಕ್ಷ್ಮಯ್ಯನವರು ಬಂದು ನಿಂತು, ಅತಿ ವಿನಯದಿಂದ ನಮಸ್ಕರಿಸಿ]

R. M. ಲಕ್ಷ್ಮಯ್ಯ——ನಮಸ್ಕಾರ ಸಾರ್,(ಚಿತ್ರಗುಪ್ತನಿಗೆ ಈ ಕಡೆ ಲಕ್ಷ್ಯವೇ ಇಲ್ಲ. ಆದುದರಿಂದ ಪುನಃ) ನಮಸ್ಕಾರ ಸಾರ್,(ಆದರೂ ಚಿತ್ರಗುಪ್ತ ನೋಡುವುದಿಲ್ಲ) ....ಸಾಹೇಬ್ರು ಅಪ್ಣೆಕೊಡ್ಸಿದ್ರು. ತಮ್ಮಿಂದೆ ...ಎಲ್ಲ ಬಿನ್ನವಿಸ್ಕೊಂತ....

ಚಿತ್ರಗುಪ್ತ——(ಸಿಡುಕಿನಿಂದ) ಒಂದ್ ಚೀಟಿ ತೊಗೊಂಡ್ಬನ್ರಿ!

R. M. ಲಕ್ಷ್ಮಯ್ಯ——(ನಿಧಾನವಾಗಿ) ಅಯ್ಯೋ, ಅಯ್ಯೋ, ಅವರ್ ಚೀಟೀಯಿಂದ ಏನಾಗುತ್ತೆ, ಸ್ವಾಮಿ! ಎಲ್ಲಿ ತಮ್ಮ(ದೇಶಾವರ ನಗು) ಆ್ಞ.... ತಮ್ಮಿಂದ ನಮ್ಮನೆ ಉಳೀಬೇಕು ...ಏನೋ ತಮ್ಮ ಮತ್ತು ತಮ್ ಸಾಹೇಬ್ರ ಆಶೀರ್ವಾದ್‌ದಿಂದ ಈ ಯುದ್ಧದೊಳ್ಗೆ, ಈ ಐದ್ ವರ್ಷ್ ದಲ್ಲಿ ಒಂದ್ ಐವತ್ ಲಕ್ಷ್ ರೂಪಾಯಿ ಸಂಪಾದ್ನೆ ಮಾಡ್ದೆ ...

ಚಿತ್ರಗುಪ್ತ——(ಈ ಕಡೆ ಮನಸ್ಸಿಡದೆ, Typistನ ಸಂಬಂಧವಾಗಿ)ಕರಾಳ -ಆ ಇದನ್ನ ಮೂರ್ ಕಾಪಿ ಮಾಡ್ಬೇಕೂಂತ್ ಹೇಳು ...ಇದಕ್ Sign ಏ ಮಾಡ್ಸಿಲ್ವಲ್ಲೋ!

R.M.ಲಕ್ಷ್ಮಯ್ಯ— ಸ್ವಾಮಿ, .. ಈ ಕಡೆ ಸ್ವಲ್ಪ....ದಯ್ವಿಟ್ಟು ಲಾಲಿಸ್ಬೇಕು....ನನ್ ಹೆಂಡ್ತಿ ಇನ್ನೂ ಮುಗ್ಧೆ...ಹದಿನಾರೊರ್ಷ... ಆರ್ನೇವ್ರು ....ಹುಡ್ಗ ಒಬ್ಬ ಅವ್ನೆ- ನನ್ಮಗ(ಸ್ವಲ್ಪ ಮೌನ) ...ಅವನ್ಗೇನೊ ಇಪ್ಪತ್ತೊರ್ಷ. ಆದ್ರೆ ಇನ್ನೂ ಬುದ್ಧೀನೇ ಬೆಳ್ದಿಲ್ಲ....

ಚಿತ್ರಗುಪ್ತ— (ಈ ಕಡೆ ಲಕ್ಷ್ಯವಿಡದೆ) ಆ List ಇನ್ನೂ Type ಆಗ್ಲೇಇಲ್ಲ? ನಾಳೆ ಹೋಗ್ಬೇಕ್ ಅದು ..

R. M. ಲಕ್ಷ್ಮಯ್ಯ——ಸಾರ್ ಈ ಬಡವನ್ಕಡೆ ಸ್ವಲ್ಪ .. ಆ್ಞ ...ಭಾವ್ಮೈದ್ನ ಏನೋ ಒಬ್ಬ ಇದಾನೆ....ಆದ್ರೆ ಎಷ್ಟಾದ್ರೂ ಅವ್ನು ಹೊರಗ್ನೋನು, ಅವನ್ಮೇಲೆ ಈ ಆಸ್ತಿ ಪಾಸ್ತೀನೆಲ್ಲ ಬಿಟ್ರೆ, ಮನೇಗತಿ ಏನಾಗುತ್ತೆ ನೀವೇ ನೋಡೀ ಸಾರ್........ಆದ್ರಿಂದ ದಯ್ವಿಟ್ಟು ಒಂದ್

ಹತ್ತೊರ್ಷ Extension Sanction ಮಾಡಿಸ್ಕೊಟ್ರೆ ತುಂಬ ಉಪ್ಕಾರ ಮಾಡ್ದಾಗ್ ಆಗುತ್ತೆ....ದಯ್ಪಿಟ್ಟು....

ಚಿತ್ರಗುಪ್ತ—(ಏನೋ ಬರೆಯುತ್ತಿದ್ದವನು ಬರೆಯುತ್ತಲೇ ಕೇಳುತ್ತಾ, ಹಾಗೆಯೆ) ಏನ್ರಿ ನಿಂಪುರಾಣ ಅದು ?

R.M.ಲಕ್ಷ್ಮಯ್ಯ—ಅದೇ ಸಾರ್....ಇನ್ನೂ ನಲ್ವತ್ತೊರ್ಷ, ಮನೇಸ್ಥಿತಿ ಚೆನ್ನಾಗಿಲ್ಲ .... ಆದ್ದರಿಂದ ತಾವು ನನ್ಗೆ ಒಂದ್ ಹತ್ತೊರ್ಷ Extension Sanction ಮಾಡ್ಸಕೊಟ್ರೆ....

ಚಿತ್ರಗುಪ್ತ- ಅದ್ಯಾಗ್ರಿ ಆಗುತ್ತೆ ?

R M.ಲಕ್ಷ್ಮಯ್ಯ— ಸಾಹೇಬ್ರಿಗೆ ಎಲ್ಲ ಅರ್ಜಿ ಮಾಡ್ಕೊಂಡೆ....

ಚಿತ್ರಗುಪ್ತ— (ಆಸಕ್ತಿ ಇದ್ದರೂ ಉದಾಸೀನದ ನಟನೆಯಲ್ಲಿ) ಏನ್ಹೇಳಿದ್ರು ಅವರು ?

R.M.ಲಕ್ಷ್ಮಯ್ಯ--ಅವ್ರೇನ್ಹೇಳ್ತಾರೆ ಸಾರ್ (ಸ್ವಲ್ಪ ನಗು) ತಾವ್ ಹೇಳ್ಕೊಟ್ಟ್ಯಾಗ್ ತಾನೇ ಅವ್ರು ಹೇಳೋದು....ತಮ್ಮಪ್ಪನೆ ..

ಚಿತ್ರಗುಪ್ತ- -ಅದಾಗೋ ಹಾಗಿಲ್ರಿ. List ಪ್ರಕಾರ ನೀವ್ ಬರ್ಬೇಕಾಗಿತ್ತು. ಬಂದಿದೀರಿ, ಅಷ್ಟೆ. ನಾವೇನ್ಮಾಡೋಕ್ ಸಾಧ್ಯ ?

R.M.ಲಕ್ಷ್ಮಯ್ಯ—ಇಲ್ಲ ಸಾರ್....ನಿಮಗ್ ನನ್ಸ್ಥಿತಿಯೆಲ್ಲ ಚೆನ್ನಾಗ್ ಗೊತ್ತಿದೆ....ಅದೂ ಅಲ್ದೆ....

ಚಿತ್ರಗುಪ್ತ—ಹ್ಞು ಹ್ಞು ಹ್ಞು....ನಡ್ಯೋಹಾಗಿಲ್ಲ... Order ಆಗ್ಹೋಗಿದೆ.

R.M.ಲಕ್ಷ್ಮಯ್ಯ—ತಾವ್ ಇದೊಂದ್ಸಲ ಉಪ್ಕಾರ ಮಾಡಿದ್ರೆ.... ಏನೋ ತಮ್ ಹೆಸರ್ಹೇಳ್ಕೊಂಡು ಇನ್ನೊಂದ್ ಹತ್ ಲಕ್ಷರೂಪಾಯ್ ಸಂಪಾದಿಸ್ಬೇಕೂಂತ .... ಅದೂ ಅಲ್ದೆ ನಮ್ಮನೇನೇ ಹಾಳಾಗುತ್ತೆ

ಸಾರ್....ತಾವ್ ದಯ್ವಿಟ್ಟು ಈ ಉಪ್ಕಾರ ಮಾಡಿದ್ರೆ, ವ್ಯಾಪಾರ್ದಲ್ ಸ್ವಲ್ಪ ನನ್‌ಮಗೂನ್ ಕುದಿರ್ಸಿ, ನಾನೀಕಡೆ ಬಂದ್ಬಿಡ್ತೇನೆ....

ಚಿತ್ರಗುಪ್ತ—(ರೇಗಿ) ಇದೇನ್ Death Officeಓ ಇಲ್ಲ s ಮಸ್ಕಿರೀನೋ! ನಾವೇನ್ರಿ ಮಾಡೋಣ.... R.M. ಲಕ್ಷ್ಮಯ್ಯ ಇವತ್ ಬರ್ಲೇಬೇಕೂಂತ್ List ನಲ್ಲಿರೋವಾಗ ...?

R.M.ಲಕ್ಷ್ಮಯ್ಯ—(ದೇಶಾವರದ ನಗೆ) ಅಯ್ಯೋ List ಗಿಸ್ಟ್ ಎಲ್ಲ ತವ್ಮ ಕೈಲೇಇರುವಾಗ....

ಚಿತ್ರಗುಪ್ತ—(ಮತ್ತೆ ರೇಗಿ) ಏನ್ರಿ ನೀವ್ ಹೇಳೋದು?....ಇದೇನ್ ನಿಮ್ ವ್ಯಾಪಾರ ಕೆಟ್ಹೋಯ್ತೆ! ಸಾಲದ್ ಲೆಕ್ಕಲ್ಲಿ ಆನಾಮೀಗ್ ತಿಳೀದ್ ಹಾಗೆ ಸೊನ್ನೆ ಮೇಲ್ ಸೊನ್ನೆ ಹೇರಿ ಎಂಟ್ರಾಣೆ ಹೊಡ್ಯೋಕೆ! ಸಾಹೇಬರ್ ಕಣ್ಣಿಗ್ ಬಿದ್ಬಿಟ್ರೆ .. ಆಮೇಲೆ s s s ...

R.M.ಲಕ್ಷ್ಮಯ್ಯ—ಅಯ್ಯೋ ಸಾರ್ ಸಾಹೇಬ್ರ್ ಏನ್ಮಾಡ್ತಾರೆ .. ಅವರೇ ತವ್ ಕೈಲಿರೋವಾಗ.... ತಾವ್ ಮನಸ್ಮಾಡಿದ್ರೆ ಸಾಹೇಬ್ರು ಇಲ್ಲ ಅನ್ನೊಲ್ಲ. ತಾವು ಅವರ್ ರಾಜೀನಾಮೆ ಪತ್ರ ಬರೆದಿಟ್ರೊ ಕಣ್ಮುಚ್ಕೊಂಡ್ ರುಜುಮಾಡ್ತಾರೆ... ನಮ್ ಭೂಮೀಲೂ ಅಷ್ಟೆ .. ... ಇಂಥಾವೆಷ್ಟೋ ನಡ್ದಿವೆ .. Head clerk ಏ ಮುಖ್ಯ!. .ಅವರಿಗ್ಗೊತ್ತಿರೋಷ್ಟು....

ಚಿತ್ರಗುಪ್ತ- (ಗಾಬರಿಯಿಂದ ಗುಸುಗುಟ್ಟುತ್ತಾ) ಛೆ ಛೆ ಛೆ . ಏನ್ರಿ ನೀವ್ ಹೇಳೋದು ...ಇದೆಲ್ಲ ಸಾಹೇಬರ್ ಕಿವೀಗ್ ಬಿದ್ಬಿಟ್ರೆ!....

R.M.ಲಕ್ಷ್ಮಯ್ಯ—ಇಲ್ಲ ಸಾರ್ ಛೆ,ಛೆ,....ಆದ್ರೆ ಇರೋವಿಷ್ಯ ಹೇಳ್ದೆ, ಅಷ್ಟೆ. ತಾವ್ ಮನಸ್ಮಾಡಿದ್ರೇ ಬೇರೇ ಯಾರಾದ್ರೂ ಲಕ್ಷ್ಮಯ್ಯ ....ಅರರೆ! ಅಂದ್ಹಾಗೆ ನಮ್ ಬಂಗ್ಲೆ ಪಕ್ದಲ್ಲೆ ಇರೋ P. M. ಲಕ್ಷ್ಮಯ್ಯ, ತುಂಬ ಬಡ್ವ ಸಾರ್....ವಯಸ್ಸೂ....ಆಗಿದೆ.... ಮನೆ

ತುಂಬ ಮಕ್ಕಳಿರೋದ್ರಿಂದ, ಆತ ಸನ್ಬದ್ಲು, ಇಲ್ಲೀಗ್ ಬಂದ್ರೆ ...ಆ್ಞ ....ಅವನ್ಗೂ ಅನ್ಕೂಲ . ನ್ಯಾಯ್ವಾಗ್ ನಸ್ಗಿಂತ ಮೊದ್ಲು ಅವನಿಗ್ ತಮ್ ದರ್ಶನ್ ಆಗ್ಬೇಕು ..ತಮ್ ಕರುಣೆ ಅವನ್ಮೇಲ್ ಬೀಳ್ಬೇಕು, ಪಾಪ. ಈ ಜೀವನ ಬ್ಯಾಡ ದೇವ್ರೇಂತ ಸದಾ ತಮ್ಮನ್ನೇ ಧ್ಯಾನಿಸ್ತಾ ಇರ್ತ್ತಾನೆ ಆದ್ರಿಂದ ...

ಚಿತ್ರಗುಪ್ತ- -ಅರರೆ, ಇದೇನ್ ಮಕ್ಕ್ಯಾಟಾನೇನ್ರಿ! ಇದನ್ನಳ್ಸಿ ಅದನ್ಬರಿ ಅದನ್ನಳ್ಸಿ ಇದನ್ಬರಿ ಅನ್ನೋಕೆ....ನಮ್ಗೇನ್ ಮೇಲ್ಪಟ್ ಆಫೀಸರುಗಳಿಲ್ಲವೇ?...ರುದ್ರ ಸಾಹೇಬ್ರು, ವಿಷ್ಣು ಸಾಹೇಬ್ರು ಇವರ್ಕಣ್ಗೆಲ್ಲ ಬಿದ್ಬಿಟ್ರೆ ಸುಮ್ನೆ ಬಿಟ್ಟಾರೆ ನಮ್ಮನ್ನ! ಅದ್ರಲ್ಲೂ ಬೃಹಸ್ಪತಿ Inspectionಸ್ಗೆ ಬಂದಾಗ್ ಸಿಕ್ಕೊಂಡ್ಬಿಟ್ರೆ ನಮ್ ಗತಿ ಗತಿಯೆ! ಒಳ್ಳೆ ಮನುಷ್ಯರು! ನಾವ್ ನಿಮ್ ಮಾತ್ಕೇಳ್ಕೊಂಡು ತಲೇ ಕಳ್ಕೋಬೇಕಷ್ಟೆ... ....

R.M. ಲಕ್ಷ್ಮಯ್ಯ—ಏನೋ ಈ ಬಡವನ್ ಮೇಲೆ ಕರುಣೆ ಇಟ್ರೆ, ತಮ್ ಹೆಸರ್ಹೇಳ್ಕೊಂಡು ಒಂದ್ ಹತ್‌ಲಕ್ಷ್ರೂಪಾಯ್‌ನಾದ್ರೂ ಸಂಪಾದ್ನೆ ಮಾಡ್ಬೇಕೂಂತ....ನನ್ಗೆ ತಾವ್ ಅಷ್ಟು ಸಹಾಯ ಮಾಡೋವಾಗ ನಾನು ತಮ್ಮನ್ ಮರ್ರ್ಯೋದುಂಟೆ! ನನಗ್ ಲಾಭ ಆಗೋ ಕಡೆ ತಮ್ಗೂ ಲಾಭ ಆಗ್ಬೇಕೂಂತ್ಲೇ ನನ್ನಭಿಲಾಷೆ........

ಚಿತ್ರಗುಪ್ತ- -ಅದೆಲ್ಲ ಸರೀರಿ....ಆದ್ರೇ....(ದೃಷ್ಟಿಯನ್ನು ಬೇರೆಯ ಕಡೆ ಹೊರಳಿಸಿ) ಲೋ ಕರಾಳ....(ಕಿರೀಟವನ್ನು ಸರಿಪಡಿಸಿಕೊಳ್ಳುತ್ತಾ ನಿಲ್ಲುವನು.)

R. M. ಲಕ್ಷ್ಮಯ್ಯ—ಏನೋ ಸಾರ್....ದಯ್ವಿಟ್ಟು....ಎಲ್ಲ ತಮ್ಕೈಲೇ ಇರೋವಾಗ....ಓಹೋ ತಮಗ್ ಕಾಫೀಗ್ ಹೊತ್ತಾಯ್ತೂಂತ್ ಕಾಣುತ್ತೆ. ಕ್ಷಮ್ಸಿ ಸಾರ್....ಇಲ್ಲೆಲ್ಲ ಏನ್ಮಾತಾಡೋದು....ತಮ್ ಸೇವೆ ಮಾಡೋ ಅವ್ಕಾಶ ಕಲ್ಪಿಸ್ಕೊಡ್ಬೇಕು....ಬನ್ನಿ ಸಾರ್, ಹೋಗೋಣ, ಹಾಗೇ ಸ್ವಲ್ಪ ಕಾಫಿ....(ಕರಾಳನ ಪ್ರವೇಶ)

ಚಿತ್ರಗುಪ್ತ—ಹ್ಞ್ಞ, ಹ್ಞ್ಞ, (ಕರಾಳನನ್ನು ಕುರಿತು) ಲೋ ಕರಾಳ, ನಾನು Clubಗ್ ಹೋಗ್ಬಿಟ್ ಬರ್ತೀನಿ, ಸ್ವಲ್ಪ ಈ filesನ ಸರ್‍ಯಾಗ್ ಇಟ್ಟಿರು....ನಾನ್ಬಂದು ಅವ್ನೆಲ್ಲ ಆಮೇಲೆ........

ಕರಾಳ—ಆಗಲಿ ಬುದ್ಧಿ.

[ತೆರೆ]

## ಉಪದೃಶ್ಯ: Coffee Clubಇನ ಹತ್ತಿರ

[R.M. ಲಕ್ಷ್ಮಯ್ಯನವರು ಮತ್ತು ಚಿತ್ರಗುಪ್ತ ಮಾತಾಡುತ್ತ ಬರುವರು.]

R.M. ಲಕ್ಷ್ಮಯ್ಯ—ಅದಕ್ಕೇನ್ ಸಾರ್,....ಅರ್ಥವಾಯ್ತು. Officeಉ ಆಂದ್ರೆ ಒಂದ್ ಸಂಸಾರ ಇದ್ದಾಗೆ....ಒಂದ್ಮನೆ ಇದ್ದಾಗೆ.... ಒಬ್ರಿಗೊಂದ್ ಒಬ್ರಿಗೊಂದ್ ಮಾಡೋಕ್ ಸಾಧ್ಯವೇ?....

ಚಿತ್ರಗುಪ್ತ— ಆಮೇಲೇ....ನಮ್ ಸಾಹೇಬ್ರು....ಬಹಳ ಒಳ್ಳೇವ್ರು.... ಚಿನ್ನದಂಥ ಮನುಷ್ಯ........ಇದುವರ್ಗೂ ಒಬ್ಬರಿಂದ ಒಂದ್ ಬಿಡಿ ಕಾಸೂ ತೊಗೊಂಡಿಲ್ಲ....

R.M. ಲಕ್ಷ್ಮಯ್ಯ—ಅಯ್ಯೊ, ಅಯ್ಯೊ, ಆಫೀಸ್ರು....ಅವರ್ ಕೇಳ್ತಾರ್‍ಯೇ! ನಮ್ ಭೂಮೀಲೂ ಅಷ್ಟೆ....ಸಾಹೇಬ್ರು ಕೇಳೋದೇ ಇಲ್ಲ....

ಚಿತ್ರಗುಪ್ತ—(ಸಮರ್ಥಿಸಿ) **ಕೇಳೊಲ್ಲ**....ಅದ್ರೇ....ಅವರಿಷ್ಟಪಡ್ತಾರೇಂತಲ್ಲ ನಾ ಹೇಳೋದು. ನಿಮ್ ಭೂಮೀಜನ ಮಾಡ್ತೀರೋ ಅನ್ಯಾಯ ನೋಡೋಕ್ ಆಗ್ದೆ ನಾ ಹೇಳ್ತಾ ಇರೋದು....ನ್ಯಾಯದ್ ವಿಷ್ಯ ನಾ ಹೇಳೋದು....ಅಲ್ಲ....ನಿಮ್ ಭೂಮೀಲಿ....ರುದ್ರ, ವಿಷ್ಣು, ಇವರ್ಗೆಲ್ಲ ಅಂಥಂಥ ದೊಡ್ಡ್ ದೊಡ್ಡ್ ದೇವಸ್ಥಾನಗಳಿರೋವಾಗ ನಮ್ ಸಾಹೇಬ್ರಿಗೆ—Equal Statusನಲ್ಲಿದ್ರೂ ಇವರ್ಗೆ ಒಂದ್.... (ತೊದಲುತ್ತ)........ಒಂ....ಪಾಳ್‌ಗುಡೀನೂ ಇಲ್ಲಾಂದ್ರೆ....ನಾಚಿಕ್ಕೇಡು....ಬಹಳ....ಅನ್ಯಾಯ....

R.M. ಲಕ್ಷ್ಮಯ್ಯ ಅಯ್ಯೋ ಅಯ್ಯೋ ಅವಕ್ಕೇನ್ ಸಾರ್ ......ಅರ್ಥ ವಾಯ್ತು....ನಾನ್ ಮಾಡಿಸ್ತೀನಿ ಸಾರ್ ...First Classಆಗ್ ಮಾಡಿಸ್ತೀನಿ ...ಎತ್ತರ ವಾಗ್ ಒಂದ್ ದೇವಸ್ಥಾನ—ಹಿಮಾಲಯ ಪರ್ವತ ಅದೊ! ಇದೊ! ಅಂತ ಅನುಮಾನ ಬರ್ಬೇಕು—ಅಷ್ಟ ರ್ಮಟ್ಟಿಗೆ ಕಟ್ಸಿ....ಒಳ್ಗೆ... ಒಳ್ಳೆ....ಕರೀಕಲ್ನಲ್ಲಿFirst Classಆಗ್ ಸಿವ್ನಾಹೇಬರ್ ಮೂರ್ತಿ ಮಾಡ್ಸಿ, ಅದರ್ಮುಂದೇನೆ ಈರಣ್ಣನ್ ಮುಂದ ಬಸವಣ್ಣ ಇರೋ ಹಾಗೆ....ತಾವ್ ದಯ್ವಿಟ್ಟು ಏನೂ ತಿಳ್ಕೋ ಕೂಡ್ದು .. ಬಟ್ಟಾಡಾಂತ್ ಹೇಳ್ಳೆ(ಕೂಡ್ದು ...ಇದು ನನ್ನಿಷ್ಟ, ತವ್ ನೇಪೆ. ನನ್ ಮನಸ್‌ನಲ್ ಬಂದ್ಬಿಟ್ಟಿವೆ. ಆದ್ರಿಂದ ಅಡ್ಡಿ ಬರ್ಕೂಡ್ದು ದಯ್ವಿಟ್ಟು. ಕರೀ ಕಲ್ನಲ್ಲಿ ಒಳ್ಳೆ ಸಿವಮ್ಮೂರ್ತಿ ಮಾಡ್ಸಿ....

ಚಿತ್ರಗುಪ್ತ—(ಇಷ್ಟ ಬಿದ್ದರೂ ಬೂಟಾಟಿಕೆ) ಛೆ, ಛೆ, ಅಯ್ಯಯ್ಯೊ....ನನ್ನ ಚ್ಚ್ ಚ್ಚ್, ನನ್ಗೇನು ...ತಾವ್....(ನಗುತ್ತಾ)....ನ....

R.M. ಲಕ್ಷ್ಮಯ್ಯ ತಾವ್ ಹಾಗನ್ಬೇಕೂಡ್ದು ದಯ್ವಿಟ್ಟು........ಆ ಮೂರ್ತೀನ ಆ ಗಂಡೆನ್ನು ಬದ್ಲು ಪ್ರತಿಷ್ಠೆ ಮಾಡಿಸ್ತೀನಿ. ಆಮೇಲೆ ....ಆ ಅವರಿಬ್ಬರು ಬೇರೆ ಇದಾರಲ್ಲ....ಆ Typistಉ, 2nd Clerkಉ. ಅವರಿಬ್ಬರ್ದೂ ಮಾಡ್ಸಿ, ಗರ್ಭಗುಡೀ ಹೊರ್ಗೆ ಜಯ ವಿಜಯರ್ಹಾಗೆ ಆಕಡೆ ಈಕಡೆ ನಿಲ್ಲಿಸ್ಬಿಡೋದು. ಆಮೇಲೆ........ ಬೇಕಾದ್ರೆ....ಇನ್ನೂ ಇಲ್ಲಿ ಯಾರ್ಯಾರೊ ಇದಾರಲ್ಲ–ಕರಾಳ, ನಾಶ, ವಗೈರೆ—ಅವರ್ನೆಲ್ಲ ಮಾಡ್ಸಿ, ಅಶ್ವತ್ಥ್ ಕಟ್ಟೆ ನಾಗಪ್ಪಂದ್ರಾಗೆ —ಅಲ್ಲೊಂದ್ ಇಲ್ಲೊಂದ್ ಎಲ್ಲ ಹೂಳಿಸ್ಬಿಡ್ತೀನಿ....ಣ್ಣ....

ಚಿತ್ರಗುಪ್ತ—(ಸಮ್ಮತಿಯಿತ್ತು ಆಗಾಗ ' ಪ್ಲು, ಪ್ಲು ' ಎನ್ನುತ್ತಿದ್ದು, ಸಂತೋಷ ದಿಂದ) ಹ್ಹೂ ಅಂತೂ ಪರ್ವಾಗಿಲ್ಲ....ತಾವೆಲ್ಲ ಚೆನ್ನಾಗೇ ಮಾಡಿ ಸ್ತೀರಿ....ನಂಗೊತ್ತಿಲ್ವೇ!....ತಾವು. ..ಆದ್ರೇ....ಕಾಫಿ ತೊಗೊಂಡ್ಮೇಲೆ ನಾಯೇಬರ್ನ ನೋಡ್ಬಿಡೋಣ....ಈಗ....ಅಂತೂ....ಅವ್ರೇನೊ ಸ್ವಲ್ಪ

ಜೋರು....ಆದ್ರೆ....ನಾನೇನು....ಅಂಥ....ಏನಾದ್ರೂ ಅಗ್ಲಿ, ತಾವೂ ಸ್ವಲ್ಪ, ಸಮಯ ಬಂದ್ರೆ ಒಂದೆರಡು....

R.M. ಲಕ್ಷ್ಮಯ್ಯ—ಅಯ್ಯಯ್ಯೋ, ನಾನೂ ಎಲ್ಲ ಹೇಳ್ತೀನಿ ಸಾರ್....

ಚಿತ್ರಗುಪ್ತ—ಕಾಫಿ ಆದ್ಮೇಲ್ ನೋಡ್ಬಿಡೋಣ ಹಾಗಾದ್ರೆ....ಸಾಹೇಬರ್ನ....(ಹೋಗುವರು)

[ತೆರೆ ಮೇಲೇಳುವುದು.]

**Death Officeಉ: ಯಮಸಾಹೇಬರ Tableಉ**

[ಚಿತ್ರಗುಪ್ತ ಮತ್ತು ಲಕ್ಷ್ಮಯ್ಯನವರು ಯಮರಾಯರ ಹತ್ತಿರ ನಿಂತು]

ಚಿತ್ರಗುಪ್ತ—(ನಮಸ್ಕರಿಸಿ) ನಮಸ್ಕಾರ ಸಾರ್....ಇವ್ರು ಬಹ್ಳ ಗೋಳಾಡ್ತಾ ಇದಾರೆ....ಆದ್ರಿಂದ ಇವರ್‌ಗೊಂದ್ ಹತ್ವರ್ಷ Extension Sanction ಮಾಡ್ಬಹ್ದೂಂತ ಕಾಣುತ್ತೆ....

ಯಮ—ಏನಿದು, ಚಿತ್ರಗುಪ್ತ! ನೀನೂ ಹೀಗ್ಹೇಳ್ತಾ ಇದೀಯಲ್ಲ?.... ಅದ್ಹ್ಯಾಗ್ ಸಾಧ್ಯ?

ಚಿತ್ರಗುಪ್ತ—Recordನಲ್ಲೂ....ಅಷ್ಟೇನೂ....ತೊಂದ್ರೆ ಆಗೊಲ್ಲಾಂತ.... ಕಾಣುತ್ತೆ. ಅಂಥದೇ Serious Case ಅಲ್ಲ....ಆದ್ರಿಂದ.... ಪಾಪ,....

ಯಮ:—(ರೇಗಿ) ಏನು! Recordನಲ್ಲಿಲ್ವೆ? ಇವತ್ತು ಇವರ್ ಬರ್ಬೇಕೂಂತ್ ಇಲ್ವೆ?....

ಚಿತ್ರಗುಪ್ತ—ಅಯ್ಯಯ್ಯಯ್ಯೋ Listನಲ್ಲಿದೆ....Recordನಲ್ಲಿದೆ........ ಆದ್ರೇ ಸ್ವಲ್ಪ ದುಡ್ಡಿರೋರು....ಮನೇಲಿ ಬಹ್ಳ ತೊಂದ್ರೇಂತ ಪೇಚಾಡ್ತಿದಾರೆ....ಆದ್ರಿಂದ....

ಯಮ—No-No No No! ಅದ್ಹ್ಯಾಗ್ ಆಗುತ್ತೆ....? ನೀ ಒಳ್ಳೆ....

ಚಿತ್ರಗುಪ್ತ—(ಪತ್ರಿ ರಸಿಂತು ಸ್ವಲ್ಪ ಮೆತ್ತಗೆ) ಅಲ್ದೇ....ಇನ್ನೂ ಏನೇನೋ ಹೇಳಿದಾರೆ....ಆದ್ರಿಂದ....

ಯಮ—ಇಂಥವ್ರೆಷ್ಟೋ ಜನ ಆಗ್ಹೋದ್ರು....ಎಲ್ಲ ಬಾಯ್ಲ್ ಹೇಳ್ತಾರಷ್ಟೆ.

ಚಿತ್ರಗುಪ್ತ—(R.M. ಲಕ್ಷ್ಮಯ್ಯನಿಗೆ ಕೇಳುವಂತೆ, ಗಟ್ಟಿಯಾಗಿ) ಛೆ ಛೆ ಛೆ ಛೆ ....ಇವರ್ ಸರ್ವಾಗಿಲ್ಲ....ಸಾರ್....

R. M. ಲಕ್ಷ್ಮಯ್ಯ—ಇಲ್ಲ ಸಾರ್....ತಮ್ ಸೇವೆ....ಛೆ ಛೆ....ಹಾಗೆ.... ನಮ್ಗ ವ್ಕಾಶ ಸಿಕ್ಕೋದೇ ಕಷ್ಟ....

ಯಮ—ಏನೋಪ್ಪ....ಹ್ಞು....ಹೋಗಿ (ದರ್ಪದಿಂದ)........ಇದೊಂದ್ಸಲ. ಆಮೇಲೆ, ಇನ್ನೊಂದ್ಸಲ ಬಂದಾಗ್ಲೂ ಹೀಗೇ ಶುರು ಮಾಡ್ಬಿಟ್ಟೇದ್ರಿ....

R.M. ಲಕ್ಷ್ಮಯ್ಯ—ಛೆ ಛೆ ಹಾಗೆಲ್ಲ....ಮಾಡೊಲ್ಲ ಸಾರ್....

ಯಮ—(ಎದ್ದು ನಿಂತು) ಹ್ಞ, ಇನ್ ಹೊರ್ಡಿ....ಹೋಗೋವಾಗ ಸ್ವಲ್ಪ ಹುಷಾರಾಗ್ ಹೋಗ್ರಿ....ಆಮೇಲೆ ಯಾರಾದ್ರೂ ನೋಡ್ಬಿಟ್ಟಾರು !

R.M. ಲಕ್ಷ್ಮಯ್ಯ—ಅಯ್ಯೋ, ನನಗ್ ತಿಳೀದೆ ಸ್ವಾಮಿ....ಭೂಮಿಾಲ್ ಚೆನ್ನಾಗ್ Practice ಆಗಿದೆ.

ಯಮ—ಇನ್ನೂ ಅದೇನೇನೋ ಹೇಳಿದ್ರಂತಲ್ಲ....ಅದೆಲ್ಲ ಸರ್ಯಾಗ್....

R.M. ಲಕ್ಷ್ಮಯ್ಯ—ಆಗ್ಬಹ್ದು ಸಾರ್, First Class ಆಗಿ....ಎಲ್ಲ.... ಹ್ಞ....ಇನ್ನ....ತುಂಬ ಉಪ್ಕಾರ ಆಯ್ತು ಸಾರ್ ನನ್ಗೆ....ನಮಸ್ಕಾರ, (ಯಮರಾಯರು ಒಳಗೆ ಹೋಗುವರು) ಹೋಗ್ಬಿಟ್ಬರ್ತೀನಿ....(ಹೊರಡುವನು.)

(ಚಿತ್ರಗುಪ್ತ ಆತನ ಹಿಂದೆ ಸ್ವಲ್ಪ ದೂರ ನಡೆದು, ಬಲಗೈಯಲ್ಲಿ ಚುಟಿಕೆ ಹೊಡೆದು)

ಚಿತ್ರಗುಪ್ತ—ಲಕ್ಷ್ಮಯ್ಯನೋರೆ.... ಸ್ವಲ್ಪ....

R.M. ಲಕ್ಷ್ಮಯ್ಯ—(ಹಿಂದಿರುಗಿ ಬಂದು) ಓಹೋ....ಬಂದೆ....

ಚಿತ್ರಗುಪ್ತ—ಏನೂ ಇಲ್ಲ....ಆ....ಯಾರಾದ್ರೂ ದಾರೀಲಿ... ....ಏನಾದ್ರೂ ವಿಷ್ಯ ಕೇಳಿದ್ರೆ....ಈ ದೇವಸ್ಥಾನದ್ ವಿಷ್ಯಾನೆಲ್ಲ....

R. M. ಲಕ್ಷ್ಮಯ್ಯ—ಛೆ, ಛೆ, ಯಾರೆದ್ರಿಗೂ ಹೇಳೋದಿಲ್ಲ....ಅಂದ್ರೇ ಎಲ್ಲಾ ಕಡೇನೂ ಇದ್ದೇ ಇದೆ ಅನ್ರಿ... ನಮ್ ಭೂಮೀಲಿರೋ ಜನಕ್ಕಿದು ಮಾಮೂಲು....ಆದ್ರೂ ನಾನೇನ್ ಹಾಗೆಲ್ಲ....ಎಳ್ಳಷ್ಟೂ ಗುಟ್ ಬಿಟ್ಕೊಡೋದಿಲ್ಲ....

ಚಿತ್ರಗುಪ್ತ–ಹ್ಞು....ಇನ್ನೇನು ಭೂಮೀಗ್ ಹೊರಟ್ಬಿಟ್ರೆ....ಇನ್ನ ನಮ್ಮನ್....

R.M. ಲಕ್ಷ್ಮಯ್ಯ—ಅಯ್ಯಯ್ಯೊ ತಮ್ಮನ್ ಮರ್ಯ್ಯೋದುಂಟೆ !.... ಖಂಡಿತ First Classಆಗ್....ನಾನೆಲ್ಲ ಮಾಡಿಸ್ಬಿಡ್ತೀನಿ....ಹೋದ್ಕೂಡ್ಲೆ ಐದ್‌ಲಕ್ಷ್ ರೂಪಾಯ್ ಎಣ್ಸಿ ನಂದಲ್ಲಾಂತ ಆಕಡೆ ಇಟ್ಬಿಡ್ತೀನಿ.... ತಮ್ಗಾ ಯೋಚ್ನೇನೇ ಬ್ಯಾಡ....ನಮಸ್ಕಾರ....

ಚಿತ್ರಗುಪ್ತ— ನಮಸ್ಕಾರ.

[R. M. ಲಕ್ಷ್ಮಯ್ಯನವರು ಹೊರಡುವರು. ತೆರೆ ಇಳಿಯುವುದು. ರಂಗದಲ್ಲಿ ಸ್ವಲ್ಪ ಹೊತ್ತು ನಿಶ್ಶಬ್ದ. ಅನಂತರ ತೆರೆ ನಿಧಾನವಾಗಿ ಮೇಲೇಳುವುದು]

## ದೃಶ್ಯ ಎರಡು: ಭೂಮಿ

[R.M. ಲಕ್ಷ್ಮಯ್ಯನವರ ಬಂಗಲೆಯ ಹಜಾರ. ಮಂಚದ ಮೇಲೆ ಮೆತ್ತನೆಯ ಸುಪ್ಪತ್ತಿಗೆಯಲ್ಲಿ R.M. ಲಕ್ಷ್ಮಯ್ಯನವರ ಹೆಣ ಮಲಗಿದೆ. ಶ್ರೀ ಸಾವಿತ್ರಮ್ಮನವರು ಪತಿಯ ಹೆಣದ ತಲೆಯ ಹತ್ತಿರ ಕುಳಿತು ಅಳುತ್ತಿದ್ದಾರೆ. ಮಗ ಮುದ್ರಾಮು ತಂದೆಯ ಕಾಲಿನ ಹತ್ತಿರ ಕುಳಿತು ಅಳುತ್ತಿದ್ದಾನೆ. ಸಾವಿತ್ರಮ್ಮನವರ ಅಣ್ಣ ಸಮಾಧಾನಪ್ಪ ಹಾಸಿಗೆಯ ಹತ್ತಿರ ನಿಂತು, ಇಬ್ಬರನ್ನೂ ಸಮಾಧಾನಪಡಿಸುತ್ತಿದ್ದಾನೆ.]

ಸಮಾಧಾನಪ್ಪ—(ದುಃಖವನ್ನು ತಡೆದುಕೊಂಡು) ರಾಮು, ಮುದ್ರಾಮು.... ಏಳಪ್ಪ....ಅವ್ನಂತೂ ಹೆಂಗ್ಸು....ಅಳ್ತಾರದಪ್ಪ....ಆಗ್ಹೋಯ್ತು.... ಆಗ್ಹೋದ್‌ಮೇಲ್ ಏನ್ಮಾಡೋಕ್ ಸಾಧ್ಯ? ಮುಖ್ಯ....ವಸ್ತು ನಮ್ದಲ್ಲ. ಎಷ್ಟೆಷ್ಟ್ ದಿನ ಇರ್ಬೇಕೋ ಅಷ್ಟಷ್ಟ್ ದಿನ ಇರ್ತಾರೆ.... ಎಲ್ಲ....ನಮ್ ನಮ್ ಕರ್ಮದ ಫಲಾಪ್ಪ....ಏಳು. (ಮುದ್ರಾಮು ಬಿಕ್ಕಳಿಸುವನು) ಹೀಗಳ್ತಾ ಕೂತ್ರೆ ಮುಂದಿನ್ ಕೆಲ್ಸ ಜರ್ಗೋದ್ ಹ್ಯಾಗಪ್ಪ....ಏಳು, ಅಳ್ಬಾರ್‍ದು....

ಸಾವಿತ್ರಮ್ಮ—(ಅಳುತ್ತಾ) ಅಯ್ಯೋ, ದೊ-ಡ್....ಡಾ-ಕ್ಟ-ರ್-ನಾ-ದ್ರೂ.... ಕರ್ಸಿ....ಅವರ್ ನೋ-ಡಿ-ದ್ರೆ-ಲಾ-ದ್ರೂ....

ಸಮಾಧಾನಪ್ಪ—ಅದೆಲ್ಲ ಹುಚ್ಚು ಸಾವಿತ್ರಿ....ಈಗಾಗ್ಲೆ ಮೂರ್ನಾಲ್ಕ್ ಜನ ಡಾಕ್ಟ್ರು ನೋಡಿದ್ರು....ಎಲ್ಲ ಮುಗ್ದ್‌ಹೋಗ್ ಎಷ್ಟೋ ಹೊತ್ತಾಗ್ಹೋಗಿದೆ....ಅದೆಲ್ಲ ಭ್ರಾಂತು....ಏನ್ ಡಾಕ್ಟ್ರು ಹೋದ್ ಜೀವ ತರ್ಬಲ್ರೇ....ಅಳ್ಬಾರ್‍ದು....ನಮ್ಮದೃಷ್ಟ....ಏನ್ಮಾಡೋಕಾಗುತ್ತೆ (ತಾನೇ ಅರ್ಧ ಅಳುತ್ತಾ) ಅಳ್ಬಾರ್‍ದು....ಸುಮ್ನಿರಿ....ಆ ಜೀವಕ್ಕೊಳ್ಳೇದಲ್ಲ....

ನಾವ್ ಸುಮ್ನೆ ಹೀಗ್ ಕಾಯ್ತಾ ದೇಹಾನಿಟ್ಕೋಬಾರ್ದು....ಏಳ್ರಿ ....ಇನ್ನ ಮುಂದಿನ್ಕೆಲ್ಸ ಜರಗ್ಬೇಕಲ್ಲ....ನಾನು, ಆ ದ್ಯಾಂವಣ್ಣಂಗೆ ಗಂಧದ್ ಚಕ್ಕೆ ಗಾಡಿ ಹೊಡಿಸ್ಕೊಂಡ್ಬಾಂತ ಕಳ್ಸೀದೀನಿ. ಏಳು, ಮುದ್ರಾಮು....ಹೀಗಳ್ತಾ ಕೂತ್ಕೊಂಡ್ರೆ....ಮುಂದಿನ್ಕೆಲ್ಸ ?........ ಏಳು, ಎದ್ದು....ಆ ಗಂಧದ್ ಕೋಠಿ Office ಇಗ್ Phone ಮಾಡಿ ದ್ಯಾಂವಣ್ಣ ಅಲ್ಲಿಂದ ಗಾಡಿ ತುಂಬಿಸ್ಕೊಂಡ್ಹೋದ್ನೋ ಇಲ್ವೋ ಕೇಳ್ಕೋಡು....ಆಮೇಲೆ....ಪುರೋಹಿತರಸ್ಕರ್ಸ್ಬೇಕು..... ಸಾಮಾನ್ಸರೋಕ್ ಆ ಸೋಮಪ್ಪನ್ಕಳ್ಸಿದೀನಿ....ಹಸೀಗಳ ಸಿಕ್ಕು ತ್ತೋ ಇಲ್ವೋ....ಹಾಳ್ ಈ ಊರ್ನಲ್ ಅದಕ್ಕೊಂದ್ ಬರ್ಗಾಲ.... ಹ್ಞು....ಏಳು....

ಸಾವಿತ್ರಮ್ಮ—(ಹೆಣದ ತಲೆಯಮೇಲಿಟ್ಟ ತನ್ನ ಕೈಯನ್ನು ಥಟ್ಟನೆ ಮೇಲೆತ್ತಿ, ಆಶ್ಚರ್ಯದಿಂದ) ಅಯ್ಯೋ, ಇದೇನಿದು ! ತಣ್ಣಗ್ ಕೊರೀತಾ ಇದ್ ತಲೆ ಬೆಚ್‌ಗಾಗ್ತಾ ಇದೆ !... (ಮುದ್ರಾಮು ಮತ್ತು ಸಮಾಧಾನಪ್ಪ "ಹ್ಞಾ ಬೆಚ್ಗಾಗ್ತಾ ಇದ್ಯೇ ?....!" ಎಂದು ಹತ್ತಿರ ಬರುವರು.)

ಸಾವಿತ್ರಮ್ಮ—ಉಸಿರ್‌ಬಿಡ್ತಾ ಇರೋ ಹಾಗಿದೆ !

ಸಮಾಧಾನಪ್ಪ—ಉಸಿರ್ ಆಡ್ತಾ ಇದ್ಯೇ !....ಮುದ್ರಾಮು ಆ ಕನ್ನ್ಡಿ ತೊಗೊಂಡ್ಬಾ ಬೇಗ....

ಮುದ್ರಾಮು—(ಕನ್ನಡಿಯನ್ನು ಸಮಾಧಾನಪ್ಪನವರ ಕೈಗೆ ಕೊಡದೆ, ಅದರಲ್ಲಿ ತನ್ನ ಮುಖ ನೋಡುತ್ತಾ) ಕನ್ಡಿ ! ಕನ್ಡಿ !....ಹ್ಞು....

ಸಮಾಧಾನಪ್ಪ—ಏ, ತಾ ಇಲ್ಲಿ (ಹೆಣದ ಮೂಗು—ಬಾಯಿಗೆ ಅರೆನಿಮಿಷ ಕನ್ನಡಿ ಹಿಡಿದು ನೋಡಿ) ಹೌದು, ಉಸಿರಾಡ್ತಾ ಇದೆ !

ಮುದ್ರಾಮು—(ಆಶಾಭಂಗವಾದಂತೆ) ಅಯ್ಯೋ, ಅಪ್ಪ ಸಾಯ್ಲೇ ಇಲ್ಲ ಽ ಽ ಽ !

ಸಮಾಧಾನಪ್ಪ—ಷ್ಹ, ಮುಚ್ಕೊ ಬಾಯಿ....ಹೊಟ್ಟೇಗ್ ಸ್ವಲ್ಪ ಕಾಫಿ

ಯಾದ್ರೂ ಹೋಗುತ್ತೀನೋ....ನೋಡೋಣ. ಲೋ, ಮುದ್ರಾಮು ಆ ಫ್ಲಾಸ್ಕಿನಲ್ಲಿರೋ ಕಾಫಿ ಬಗ್ಗಿಸ್ಕೊಡು....ಹ್ಞು....ಹಾಗೇ(ಕಾಫಿಯ ಬಟ್ಟಲನ್ನು ಹೆಣದ ಬಾಯಿಗೆ ಹಿಡಿದು) ಭಾವಯ್ಯ, ಭಾವಯ್ಯ....ಕಾಫಿ ಆಷ್ಟೆ....(ಹೆಣ ಒಂದೆರಡು ಗುಟುಕು ಕುಡಿದು, ಕ್ರಮೇಣ ಬಟ್ಟಲನ್ನೇ ಖಾಲಿ ಮಾಡುವುದು. ಬಟ್ಟಲನ್ನು ಮುದ್ರಾಮುವಿನ ಕಡೆಗೆ ತೋರಿಸಿ) ಇನ್ನೊಂಸೊಲ್ಪ ಕಾಫಿ ಬಗ್ಸು ಇದಕ್ಕೆ ..

ಮುದ್ರಾಮು - (ಮುಚ್ಚುನಗು) ಅಪ್ಪ ಕಾಫಿ ಕುಡ್ದ್ಬಿಟ್ರು !

ಸಾವಿತ್ರಮ್ಮ - -(ಹೆಣದ ಮುಖವನ್ನೇ ನೋಡುತ್ತಿದ್ದು, ಆಶ್ಚರ್ಯದೊಡನೆ ಸಂತೋಷದಿಂದ) ಕಣ್ಬಿಟ್ಬಿಟ್ರು.... !!

ಸಮಾಧಾನಪ್ಪ—(ಕಾಫಿ ಬಟ್ಟಲನ್ನು ಕೆಳಗಿಟ್ಟು) ಭಾವಯ್ಯ,

R.M. ಲಕ್ಷ್ಮಯ್ಯ—ಅಬ್ಬಬ್ಬ ಸುಸ್ತಾಗ್ಹೋಯ್ತು !

ಸಮಾಧಾನಪ್ಪ—ಅಯ್ಯೊ, ಭಾವಯ್ಯ, ಎಷ್ಟ್ ಹೆದರ್ಸ್‌ಬಿಟ್ಟಿದ್ರಿ ನಮ್ಮನ್ನ ! ಹೋಗೇ ಬಿಟ್ರೀಂತ್ ಡಾಕ್ಟ್ರು ಹೇಳ್ಬಿಟ್ರು. ನಾವೂ ಮುಂದಿನ್ಕೆಲ್ಸಕ್ಕೆಲ್ಲ ಏರ್ಪಾಟ್ ಮಾಡ್ಕೊಂಡ್ಬಿಟ್ವಿ. ಆ ಸೋಮಣ್ಣ ಗಳ ಕೂಡ ತಂದ್ಬಿಟ್ನೋ ಏನೊ !

ಮುದ್ರಾಮು - ಅಯ್ಯೊ, ಎಲ್ಲ ದಂಡ ಆಗ್ಹೋಯ್ತು !

ಸಮಾಧಾನಪ್ಪ--ಮುಚ್ಕೊ ಬಾಯಿ, ಕತ್ತೆ -ಇಲ್ನೋಡು, ಓಡ್ಹೋಗಿ ಹೇಳ್ಬಿಟ್ಬಾ ಅವರೆಲ್ಲ....ಪುರೋಹಿತರ್ಗೆ, ಗಂಧದ್‌ಕೋಠೀಗೆ....ಆ ಸೋಮಣ್ಣಂಗೆ....ಬೇಗ್ಹೋಗು....ಓಡ್ತಾ (ಮುದ್ರಾಮು ನೆಗೆಯುತ್ತಾ ಓಡುವನು.) ಅಯ್ಯೊ ನಮ್ಮೆದೆ ಒಡ್ದ್ಹೋಗಿತ್ತು ಭಾವಯ್ಯ, ಹೋಗೇಬಿಟ್ರೀಂತ್ ತಿಳ್ಕೊಂಡ್‌ಬಿಟ್ಟಿದ್ವಿ....

R. M. ಲಕ್ಷ್ಮಯ್ಯ—(ಅರ್ಧ ಕುಳಿತು) ಹೋಗಿದ್ನಪ್ಪ ಸಮಾಧಿ, ಹೋಗೇ ಬಂದೆ. ಆ Death Officeಗ್ಹೋಗ್ ಬಂದಿದ್ದಕ್ಕೇ ಇಷ್ಟೊಂದ್ ಸುಸ್ತು....ಹೋಗ್ಬಿಟ್ಟೆಂದೆ....ಹ್ಞು....ಸರಿ....ಆ ಖಜಾನೇಯಿಂದ.... ಐದ್ ಲಕ್ಷ್ ರೂಪಾಯ್ ತೆಗ್ದ್ ಆ ಕಡೆ ಇಟ್ಬಿಡ್ಬೇಕು....

ಸಮಾಧಾನಪ್ಪ ಮತ್ತು ಸಾವಿತ್ರಮ್ಮ—(ಆಶ್ಚರ್ಯದಿಂದ) ಅದ್ಯಾಕೇವಾಗ ? ! !

R. M. ಲಕ್ಷ್ಮಯ್ಯ—(ಮುಂದುವರಿಸುತ್ತಾ) ಈ ಸುಡ್ಗಾಡ್ ಮಾಮೂಲ್ ಎಲ್ಲ್ಹೋದ್ರೂ ತಪ್ಪಲ್ಲ. ಈ ಭೂಮೀಲಿ ಯಮರಾಯನ್ಗೊಂದ್ ದೇವಸ್ಥಾನ ಕಟ್ಟಿಸ್ಕೊಡ್ತೀನಿ'ಅಂತ ಒಪ್ಕೊಂಡ್ ಬಂದಿದೀನಿ. ಅದಕ್ಕೇ ಒಂದ್ ಹತ್ವರ್ಷ Extension Sanction ಮಾಡಿದ್ರು.... ಹ್ಞು....ಒಂದ್ ಐದ್ ಲಕ್ಷ್ ರೂಪಾಯ್ ನಮ್ದುಲ್ಲಾಂತ್ ತೆಗೆದಿಟ್ಬಿಡೋದು....

ಸಾವಿತ್ರಮ್ಮ— ಐದ್ ಲಕ್ಷ್ ರೂಪಾಯಿ, ಅಬ್ಬಬ್ಬ !

R.M. ಲಕ್ಷ್ಮಯ್ಯ—ಅಯ್ಯೊ, ನಾನ್ಬದುಕಿದ್ರೆ ಈ ಹತ್ವರ್ಷ್‌ದಲ್ಲಿ ಐವತ್ ಲಕ್ಷ್ ರೂಪಾಯ್ ಮಡೀಬಲ್ಲೆ....ಥೂ, ಈ ಹಾಳ್ ಪದ್ಧತಿ ಎಲ್ಲ್ಹೋದ್ರೂ ತಪ್ಪಲ್ಲ ಕಣೋ ಸಮಾಧಿ ! ಅಲ್ಲಿರೋ ಪರಿವಾರದೇವತೆ ನೆಲ್ಲ ಮಾಡ್ಸಿ ಆ ದೇವಸ್ಥಾನದಲ್ಲಿಡ್ಬೇಕು. ಹ್ಞು....ಏನ್ಮಾಡೋ ಕಾಗುತ್ತೆ, ಅಧಿಕಾರ ! ಅದ್ರಿಂದ ನಮಗ್ ನಾಲ್ಕ್ ಕಾಸ್ ಪ್ರಯೋಜ್ನ ಇರೋವಾಗ ಅಧಿಕಾರಿಗಳ್ ಬಾಯ್ಗೆ—ನೋಡಿ ಬಿಟ್ಕೊಟ್ಹಾಗೆ— ಏನಾದ್ರೂ ಸ್ವಲ್ಪ ಹಾಕ್ಲೇಬೇಕು....ಇಲ್ದೇ ಇದ್ರೆ........ನಮ್ ಪುಂಗೀನೇ ಬಂದು....ಹ್ಞು ತೊಗೋ ಬೀಗದ್ ಕೈ. ಹೋಗಿ....ಆ Safeನಲ್ಲಿ ಕೆಳ್ಗಡೇ ಖಾನೇಲಿರೋ ನೋಟೀನ್ ಕಂತೆ ತೊಗೊಂಡ್ಬಾ ....ಎಣ್ಸೋಣ....

(ಬಾಗಿಲಕ್ಕೆಯನ್ನು ಸಮಾಧಾನಪ್ಪ ತೆಗೆಯುತಲೇ
ಮನೆಯಿಂದ " ಅಯ್ಯೋ, ಅಪ್ಪಾ s s, ಹೋದ್ನಲ್ಲೋ " ಎಂಬ ರೋದನ
ಕೇಳಿಬರುವುದು.)

ಸಾವಿತ್ರಮ್ಮ—(ಗಾಬರಿಯಿಂದ) ಇದೇನ , ಪಕ್ಕದ್ಮನೇ ಹಾಗಳ್ತಾರೆ? !!
(ಸಮಾಧಾನಪ್ಪ ಹೊರಗೆ ಹೋಗಿ ಪುನಃ ಪ್ರ

ಸಮಾಧಾನಪ್ಪ—ಪಕ್ಕದ್‌ಮನೆ ಮೇಷ್ಟ್ರು ಕುಂತ್ ಕುಂತ್ವಂಗೇನೆ
ಹೋಗ್ಬಿಟ್ರಂತೆ ಪಾಪ!

[ತೆರೆ]

## ಮುಗಿವು

---